# ಈಶಾವಾಸ್ಯ ವೃತ್ತಿ

(ईशावास्य-वृत्ति)

ವಿನೋಬಾ

ಸರ್ವಸೇವಾ ಸಂಘ ಪ್ರಕಾಶನ
ಚಾಮರಾಜಪೇಟೆ, ಬೆಂಗಳೂರು-೨.

# ಈಶಾವಾಸ್ಯ ವೃತ್ತಿ

## (ईशावास्य-वृत्ति)

ವಿನೋಬಾ

ಸರ್ವಸೇವಾ ಸಂಘ
ಸಾಹಿತ್ಯ ಪ್ರಕಾಶನ ವಿಭಾಗ
17, I ಮೈನ್ ರೋಡು, ಚಾಮರಾಜಪೇಟೆ, ಬೆಂಗಳೂರು ೨

ಅನುವಾದ

ಆರ್. ಎ. ಕಶ್ಯಪ್, ಎಂ.ಎ.

ಸಿದ್ದವನಹಳ್ಳಿ ಕೃಷ್ಣಶರ್ಮ

ಪ್ರತಿಗಳು 3000

8 ಆಣೆ ಅಥವಾ 50 ನ.ಪೈಸೆ

ಮುದ್ರಣ

ಪ್ರಭಾ ಮುದ್ರಣಾಲಯ

ಬಸವನಗುಡಿ, ಬೆಂಗಳೂರು-೪

# चार शब्द

ईशावास्य-वृत्ति का कन्नड में अनुवाद छप रहा है यह तो मैं कन्नड सर्वोदय में देखता था। लेकिन समय के अभाव में उसे मैं पढ़ नहीं सका हूँ। श्री कृष्णशर्मा जैसे सिद्धहस्त लेखक ने अनुवाद किया है तो ठीक ही होगा ऐसे मान लेता हूँ।

ईशावास्य एक छोटी सी ही चीज़ है। लेकिन उसके चिंतन में मेरे जीवन के कई वर्ष व्यतीत हुए हैं। ईशावास्य वृत्ति में उस चिंतन का सार कमसे कम शब्दों में देने की कोशिश है। इसका विस्तार तो बहुत हो सकता था। लेकिन अनुभवगम्य वस्तु शब्द-विस्तार से प्रकाशित नहीं होती है। इसलिये थोडे में समाधान मान लिया। गान्धीजी की आज्ञा न होती तो शायद इतना भी न बन सकता। और यह "वृत्ति" अन्तर में ही लीन हो जाती। लेकिन उनकी आज्ञा समर्थ थी जिसने यह लिखवाया। इसलिये मैं सहज ही इसके कर्तृत्वसे मुक्त हुआ हूँ।

ईशोपनिषद् मेरे हृदय को अवर्णनीय समाधान देती है। मेरी सुबह की नित्य प्रार्थना उसी से होती है। उसके कई मन्त्र गूढ़वत भासित होते हैं। लेकिन मेरे साथ वे खुले दिल से बात करते हैं। अपना हार्द मेरे सामने प्रगट करते हैं। उसी को मैं ने टूटी फूटी भाषा में व्यक्त करने का प्रयत्न किया है।

यह चार शब्द मैं कन्नड में ही लिखता तो मुझे बहुत खुशी होती। लेकिन समय के अभाव में मैं वैसा नहीं कर सका हूँ और राष्ट्रभाषा में लिख दिये हैं।

परंधाम, पवनार, विनोबा
वर्धा २९—८—५०

# ನಾಲ್ಕು ಮಾತು

ಕನ್ನಡ ಸರ್ವೋದಯದಲ್ಲಿ ಈಶಾವಾಸ್ಯವೃತ್ತಿಯ ಅನುವಾದ ಅಚ್ಚಾಗುತ್ತಿದ್ದು ದನ್ನು ನಾನು ನೋಡುತ್ತಿದ್ದೆ. ಸಮಯಾಭಾವದಿಂದ ಅದನ್ನು ಓದಲಾಗಿಲ್ಲ. ಕೃಷ್ಣಶರ್ಮನಂಥ ಸಿದ್ಧಹಸ್ತ ಲೇಖಕ ಅನುವಾದ ಮಾಡಿರುವಾಗ ಚೆನ್ನಾಗಿಯೇ ಇರಬೇಕು ಎಂದುಕೊಂಡಿದ್ದೇನೆ

ಈಶಾವಾಸ್ಯ ಬಹಳ ಚಿಕ್ಕದು. ಆದರೂ ಅದರ ಚಿಂತನದಲ್ಲಿ ನನ್ನ ಬಾಳಿನ ಅನೇಕ ವರ್ಷ ಕಳೆದಿವೆ ಆ ಚಿಂತನ ಸಾರವನ್ನು ಕಡಮೆ ಎಂದರೆ ಬಹಳ ಕಡಮೆ ಮಾತಿನಲ್ಲಿ ಹೇಳುವ ಪ್ರಯತ್ನ ಈ ಈಶಾವಾಸ್ಯವೃತ್ತಿ ಬೇಕಾದಷ್ಟು ವಿಸ್ತಾರ ಮಾಡಬಹುದಿತ್ತು ಆದರೆ ಅನುಭವಗಮ್ಯ ವಸ್ತು ಶಬ್ದ ವಿಸ್ತರದಿಂದ ಪ್ರಕಾಶಿತ ವಾಗದು. ಅಂತೇ ಸ್ವಲ್ಪದರಲ್ಲಿಯೇ ಸಮಾಧಾನಪಟ್ಟುದಾಯಿತು ಗಾಂಧೀಜಿ ಅಪ್ಪಣೆ ಮಾಡದಿದ್ದರೆ ಇಷ್ಟು ಮಾತ್ರವೂ ಆಗುತ್ತಿತ್ತೋ ಇಲ್ಲವೋ ಈ 'ವೃತ್ತಿ' ಒಳಗೆಯೆ ಲೀನವಾಗುತ್ತಿತ್ತೇನೋ. ಆದರೆ ಅವರ ಅಪ್ಪಣೆ ಸಾಮರ್ಥ್ಯಪೂರ್ಣ ಇದನ್ನು ಬರೆಯಿಸಿತು ಅಂತೇ ಇದರ ಕರ್ತೃತ್ವದಿಂದ ನಾನು ಸಹಜವಾಗಿಯೆ ಮುಕ್ತ.

ಈಶೋಪನಿಷತ್ ನನ್ನ ಹೃದಯಕ್ಕೆ ಅವರ್ಣನೀಯ ಸಮಾಧಾನ ಕೊಡುತ್ತದೆ ಬೆಳಗಿನ ನನ್ನ ನಿತ್ಯ ಪ್ರಾರ್ಥನೆಗೆ ಇದೇ ಇದರ ಕೆಲವು ಮಂತ್ರ ಗೂಢವಾಗಿದ್ದಂತೆ ಅನಿಸುತ್ತದೆ ಆದರೆ ನನ್ನೊಡನೆ ಅವು ಮನಬಿಚ್ಚಿ ಮಾತಾಡುತ್ತವೆ. ತಮ್ಮ ಹಾರ್ದವನ್ನು ನನ್ನಿದಿರು ಪ್ರಕಟಿಸುತ್ತವೆ. ಅದನ್ನೆ ನಾನು ಹರಕುಮುರುಕು ಭಾಷೆ ಯಲ್ಲಿ ವ್ಯಕ್ತಗೊಳಿಸುವ ಪ್ರಯತ್ನ ಮಾಡಿದೇನೆ.

ಈ ನಾಲ್ಕು ಮಾತನ್ನು ನಾನು ಕನ್ನಡದಲ್ಲಿಯೇ ಬರೆದಿದ್ದರೆ ನನಗೆ ಬಹಳ ಸಂತೋಷವಾಗುತ್ತಿತ್ತು ಸಮಯಾಭಾವದಿಂದ ಹಾಗೆ ಮಾಡಲಾಗಲಿಲ್ಲ ರಾಷ್ಟ್ರ-ಭಾಷೆಯಲ್ಲಿ ಬರೆದಿದೇನೆ.

ಪರಂಧಾಮ, ಪವನಾರ್ ವಿನೋಬಾ.
ವರ್ಧಾ, ೨೯—೮—೫೦

# ಬಿನ್ನಹ

ಈ ಚಿಕ್ಕ ಪುಸ್ತಕ ವಿನೋಬಾಸಾಹಿತ್ಯದ ಅನುವಾದದಲ್ಲಿ ಮೂರನೆಯದು. ಮೊದಲೆರಡು 'ಗೀತಾಪ್ರವಚನ — ಸ್ಥಿತಪ್ರಜ್ಞದರ್ಶನ' ಅವೆರಡಕ್ಕೂ ಕನ್ನಡ ಜನ ಕೊಟ್ಟ ಪ್ರೋತ್ಸಾಹ ಇದನ್ನು ಮಾಡಿಸಿತು

ಈ ಪುಸ್ತಕದ ಅನುವಾದ ಜೊತೆಗಾರರಾದ ಶ್ರೀ ರಾಮಮೂರ್ತಿಯವರದು ಈ ಬಗೆಯ ಗ್ರಂಥಪರನ ಅವರ ಒಲವು ಅವರು ಅನುವಾದಿಸುವಾಗ ನಾನೂ ಜೊತೆಗೆ ಕೂತಿದೇನೆ—ಉದ್ದಕ್ಕೂ ಅಷ್ಟೇ ನನ್ನ ಪಾಲು ಉಳಿದುದೆಲ್ಲವೂ ಅವರದೇ ವಿನೋಬಾ ಅವರ ಹರಕೆ ಇದೆ ಎಂದೇ ಈ ಕೆಲಸಕ್ಕೆ, ಸರ್ವೋದಯದ ಕೆಲಸಕ್ಕೂ, ಕೈಹಾಕಿದೇವೆ ಇವೆಲ್ಲಕ್ಕೂ ಅವರೇ ನಿಜವಾಗಿ ಕರ್ತರು.

ಸಿದ್ಧವನಹಳ್ಳಿ ಕೃಷ್ಣಶರ್ಮ.

# ಈಶಾವಾಸ್ಯ ವೃತ್ತಿ

## ಉಪೋದ್ಘಾತ

(೧) ಈಶ – ಸ್ಮರಣಪೂರ್ವಕವಾಗಿ, ಯಥಾಶ್ರುತಿ, ಯಥಾಮತಿ ಈಶಾವಾಸ್ಯ ಉಪನಿಷತ್ತಿನಮೇಲೆ ಸಣ್ಣ ವೃತ್ತಿಯನ್ನು ಬರೆಯುತ್ತಿದೇನೆ. ಅದು ಶೃತಿ ಹೃದಯವನ್ನು ಅರಳಿಸುವಂತಹದಾಗಲೆಂದು ಬಯಸುತ್ತೇನೆ ಜೀವನದಲ್ಲಿ ತಲ್ಲೀನವಾಗಲಿ, ದೇಹಭಾವ ನವೆಯಲಿ

(೨) ಮೊದಲಿಗೆ ಉಪನಿಷತ್ ಶಬ್ದದ ಅರ್ಥವನ್ನು ನೋಡೋಣ. 'ಉಪ' ಮತ್ತು 'ನಿ' ಎಂಬ ಉಪಸರ್ಗ, 'ಸದ್' ಎಂಬ ಧಾತು ಸೇರಿ ಈ ಶಬ್ದ ಉತ್ಪನ್ನವಾಗಿದೆ. ಉಪನಿಷತ್ತುಗಳೇ ಸ್ವತಃ ಈ ಶಬ್ದದ ವ್ಯಾಖ್ಯೆಯನ್ನು ಹೀಗೆ ಸೂಚಿಸಿವೆ

> **" ಯದಾ ವೈ ಬಲೀ ಭವತಿ, ಅಥ ಉತ್ಥಾತಾ ಭವತಿ**
> **ಉತ್ತಿಷ್ಠನ್ ಪರಿಚರಿತಾ ಭವತಿ, ಪರಿಚರನ್ ಉಪಸತ್ತಾ ಭವತಿ**
> **ಉಪಸೀದನ್ ದ್ರಷ್ಟಾ ಭವತಿ, ಶ್ರೋತಾ ಭವತಿ, ಮಂತಾ ಭವತಿ,**
> **ಬೋದ್ಧಾ ಭವತಿ, ಕರ್ತಾ ಭವತಿ, ವಿಜ್ಞಾತಾ ಭವತಿ "**
>
> **ಛಾಂದೋಗ್ಯ ೭-೮-೧**

ಯಾವಾಗ ಮನುಷ್ಯ ಬಲವುಳ್ಳವನಾಗುತ್ತಾನೋ, ಆಗ ಎದ್ದು ನಿಲ್ಲುತ್ತಾನೆ, ಎದ್ದು ನಿಂತನೆಂದರೆ ಗುರುವಿನ ಸೇವೆ ಮಾಡುತ್ತಾನೆ, ಗುರುವಿನ (ಉಪ) ಹತ್ತಿರ ಹೋಗಿ (ಸದ್) ಕೂಡುತ್ತಾನೆ. ಹತ್ತಿರ ಹೋಗಿ ಕುಳಿತು ಗುರುವಿನ ಜೀವನವನ್ನು ನೋಡುತ್ತಾನೆ; ಆತನ ಉಪದೇಶ ಕೇಳುತ್ತಾನೆ, ಕೇಳಿದ್ದನ್ನು ಮನನಮಾಡುತ್ತಾನೆ, ಜ್ಞಾನಿ ಯಾಗುತ್ತಾನೆ; ಅನಂತರ ತದನುಸಾರವಾಗಿ ಕರ್ಮ ಮಾಡುತ್ತಾನೆ. ಅದ ರಿಂದ ಅಂತ್ಯದಲ್ಲಿ ಅವನಿಗೆ ವಿಜ್ಞಾನ ಎಂದರೆ ಅಪರೋಕ್ಷಾನುಭೂತಿ ಉಂಟಾಗುತ್ತದೆ. ಇದೇ ಉಪನಿಷತ್ತು.

'ನಿ' ಎಂದರೆ 'ನಿತರಾಂ'; 'ನಿಷ್ಠೆ'ಯಿಂದ ಎಂದರ್ಥ. ಈ ವ್ಯಾಖ್ಯೆಯಲ್ಲಿ ಇದು ತಪ್ಪಿಸಿಕೊಂಡಂತೆ ಕಾಣುತ್ತದೆ. ಆದರೆ ಸೇವೆಯಲ್ಲಿ 'ನಿಷ್ಠೆ' ಗೃಹೀತವಾಗಿಯೇ ಇದೆ.

(೩) ಆದರೆ ಉಪನಿಷತ್ತಿನಲ್ಲಿ ಮತ್ತೊಂದು ಕಡೆ, 'ನಿ' ಉಪ-ಸರ್ಗಕ್ಕೆ ಸೂಚಿತವಾದ ಈ ಅರ್ಥವನ್ನು ಸ್ಪಷ್ಟಮಾಡುವಂತಹ, 'ಸದ್' ಧಾತುವಿನ ಬೇರೊಂದು ಅರ್ಥವನ್ನು ತೆಗೆದುಕೊಂಡ, ಬೇರೆಯದಾದ ಒಂದು ವ್ಯಾಖ್ಯೆ ಸೂಚಿಸಲ್ಪಟ್ಟಂತಿದೆ :—

"ಬ್ರಹ್ಮಚಾರೀ ಆಚಾರ್ಯಕುಲವಾಸೀ ಅತ್ಯಂತವಮ್
ಆತ್ಮಾನಂ ಆಚಾರ್ಯಕುಲೇ ಅವಸಾದಯನ್"

ಛಾಂ. ೨-೨೩-೧

ಎಂದರೆ ಬ್ರಹ್ಮಚರ್ಯ ಪಾಲಿಸುತ್ತಾ ಗುರುವಿನ (ಉಪ) ಸಮೀಪ ದಲ್ಲಿದ್ದು, ಗುರುಸೇವೆಯಲ್ಲಿ ತನ್ನನ್ನು ಅತ್ಯಂತವಾಗಿ ಎಂದರೆ ನಿಃಶೇಷ (ನಿ) ವಾಗಿ ಸವೆಯಿಸಿ (ಸದ್) ಹೊಂದುವಂಥ ರಹಸ್ಯಭೂತವಾದ ವಿದ್ಯೆಯೇ ಉಪನಿಷತ್ತು.

(೪) ಎರಡೂ ಪರ್ಯಾಯಾರ್ಥಕಗಳನ್ನು ಒಂದೆಡೆ ಸೇರಿಸಿದರೆ ಈ ರೀತಿಯಾಗಿ ಅರ್ಥನಿಷ್ಪತ್ತಿಯಾಗುತ್ತದೆ:

೧. ಆತ್ಮಬಲ ೨. ಉತ್ಥಾನ ೩. ಬ್ರಹ್ಮಚರ್ಯ ೪. ಗುರುಸೇವೆ ಯಲ್ಲಿ ದೇಹವನ್ನು ನಿಃಶೇಷವಾಗಿ ಸವೆಸುವುದು ೫. ಗುರು (ಹೃದಯ) ಸನ್ನಿಧಿ ೬. ಜೀವನ ನಿರೀಕ್ಷಣ ೭. ಶ್ರವಣ ೮. ಮನನ ೯. ಅವ-ಬೋಧನ ೧೦. ಆಚರಣ ೧೧. ಅನುಭೂತಿ.

ಇಷ್ಟೆಲ್ಲಾ ಈ ಒಂದು ಸಣ್ಣ ಪದದಲ್ಲಿ ಅಡಕವಾಗಿದೆ. ಈ ಪ್ರಕಾರ ದಿಂದ ಉಪನಿಷತ್ ಶಬ್ದದಲ್ಲಿ ಸಮಗ್ರವಾದ ಜ್ಞಾನ ಸಾಧನೆ, ಅದರಿಂದ ಲಭಿಸುವ ಜ್ಞಾನ, ಇವೆರಡೂ ಸೂಚಿತವಾಗುತ್ತವೆ. 'ಅಮಾನಿತ್ವಂ' 'ಅದಂಭಿತ್ವಮ್' 'ಆಚಾರ್ಯೋಪಾಸನಮ್' ಇತ್ಯಾದಿ ಪ್ರಾಥಮಿಕ ಸದ್ಗುಣಗಳಿಂದ ಮೊದಲುಮಾಡಿ 'ಅಧ್ಯಾತ್ಮ ಜ್ಞಾನನಿತ್ಯತ್ವಂ, ತತ್ತ್ವ-ಜ್ಞಾನಾರ್ಥದರ್ಶನಂ' ಇಲ್ಲಿಯವರೆಗೆ ಎಲ್ಲಾ ಸಾಧ್ಯ-ಸಾಧನಗಳನ್ನೂ

ಗೀತೆ 'ಜ್ಞಾನ' ಶಬ್ದದಲ್ಲಿಯೆ ತುಂಬಿದೆ. ಉಪನಿಷತ್ತುಗಳಲ್ಲಿನ ವಿಷಯ-ವಿವೇಚನೆಯ ವಿಸ್ತಾರ ಈ ವ್ಯಾಖ್ಯೆಗೆ ಒಪ್ಪುವಂಥದು.

(೫) ಉಪನಿಷತ್ತುಗಳಿಗೆ ವೇದಾಂತವೆಂಬ ಸಂಜ್ಞೆಯೂ ಇದೆ. ಈ ಹೆಸರು ಈಶಾವಾಸ್ಯಕ್ಕೆ ಅಕ್ಷರಶಃವೇನು, ಇನ್ನೂ ವಿಶೇಷವಾಗಿಯೇ ಸಲ್ಲುತ್ತದೆ. ಕಾರಣ—ಈಶಾವಾಸ್ಯ ಯಜುರ್ವೇದದ ಕಡೆಯ ಅಧ್ಯಾಯವೇ ಆಗಿದೆ. ಅಲ್ಲದೆ ವೇದಾಂತ ಶಬ್ದದಿಂದ ವೇದ-ರಹಸ್ಯವೆಂಬ ಅರ್ಥವೂ ಅಭಿಪ್ರೇತವಾಗುತ್ತದೆ. ಈ ಅರ್ಥದಲ್ಲೂ ಈಶಾವಾಸ್ಯ ಶಿರೋಮಣಿ ಪ್ರಾಯವಾದ ಉಪನಿಷತ್ತು, ಉತ್ತಮ ವೇದರಹಸ್ಯ. ಎಷ್ಟು ಸಣ್ಣದೋ ಅಷ್ಟು ಮಹತ್ತಾದ್ದು. ಜ್ಞಾನದೇವನ ಮಾತಿನಲ್ಲಿ

"ಆಂಗೇ ಸಾನೇ ಪರಿಣಾಮೇ ಥೋರ್
ಜೈಸೇ ಗುರುಮುಖೀಂಚೇ ಅಕ್ಷರ್"

"ಆಕಾರ ಕಿರಿದು, ಪರಿಣಾಮ ಹಿರಿದು (ಮಹತ್ತಾದ್ದು); ಗುರುಮುಖದಿಂದ ಬಂದ ಅಕ್ಷರದಂತೆ" ಎಂಬಂತೆ ಈಶಾವಾಸ್ಯದ ಆರಂಭವೂ ಯಾರೋ ಗುರು ತನ್ನ ಶಿಷ್ಯನಿಗೆ ರಹಸ್ಯಜ್ಞಾನವನ್ನು ಬೋಧಿಸುತ್ತಿರುವ ಶೈಲಿಯಲ್ಲಿದೆ.

(೬) ವೈದಿಕ ವಿವೇಚನಾ ಪದ್ಧತಿಯಲ್ಲಿ ವಿಷಯದ ವಿಭಾಗವನ್ನು ತ್ರಿಕೆ, ದ್ವಿಕೆ, ಏಕಕೆಗಳಿಂದ ಮಾಡುವ ರೂಢಿಯಿತ್ತು. ಅದರಂತೆ ಇಲ್ಲೂ ಮೂರು ಮೂರು ಮಂತ್ರಗಳ ಐದು ತ್ರಿಕೆ, ಎರಡು ಮಂತ್ರಗಳ ಒಂದು ದ್ವಿಕೆ, ಒಂದು ಮಂತ್ರದ ಒಂದು ಏಕಕೆ, ಹೀಗೆ ಜೋಡಿಸಿ ಹದಿನೆಂಟು ಮಂತ್ರಗಳನ್ನು ಏಳು ವಿಭಾಗ ಮಾಡಿದೆ. ಪ್ರತಿಯೊಂದು ಮಂತ್ರವೂ ಮತ್ತೊಂದು ಮಂತ್ರದ ವಿಶಿಷ್ಟ ಆಕಾಂಕ್ಷೆಯೊಂದಿಗೆ ಜೋಡಿಸಲ್ಪಟ್ಟದ್ದಾಗಿ, ಎಲ್ಲದರಲ್ಲೂ ಈಶ್ವರ ಭಕ್ತಿಯ ಅಖಂಡ ಸೂತ್ರ ನೇಯಲ್ಪಟ್ಟಿದೆ.

(೭) ತತ್ತ್ವವಿಚಾರದಲ್ಲಿ ತ್ರೈಗುಣ್ಯ, ಧ್ಯಾನಯೋಗದಲ್ಲಿ ತ್ರಿಮಾತ್ರೆ, ತಾರ್ಕಿಕರ ವಾಕ್ಯತ್ರಯೀ, ಇತ್ಯಾದಿ ಕಾರಣಗಳಿಂದ ತ್ರಿಕೆಗಳು ಬಹಳ ಅನುಕೂಲತೆಯುಳ್ಳವಾಗುತ್ತವೆ. ಒಂದೇ ವಿಚಾರದಲ್ಲಿ ಪರಸ್ಪರ ವಿರುದ್ಧವಾದ, ಇಲ್ಲವೇ ಪರಸ್ಪರ ಪೂರಕವಾದ, ಅಥವಾ ಗೌಣ-ಮುಖ್ಯಗಳಾದ

ಅಂಗಗಳನ್ನು ತೋರಿಸಲು ದ್ವಿಕೆಗಳು ಉಪಯುಕ್ತವಾಗುತ್ತವೆ ಸಂಪೂರ್ಣ ವಿಚಾರವನ್ನು ಸೂತ್ರರೂಪದಲ್ಲಿ ಸಮರ್ಥಿಸಲು ಏಕಕೆಗಳು ಅನಿವಾರ್ಯ ಇಲ್ಲಿಯ ವಿಷಯ ವಿಭಾಗದಲ್ಲೂ ಇಂತಹ ನಿರ್ದಿಷ್ಟ ವ್ಯವಸ್ಥೆ ಕಂಡುಬರುತ್ತದೆ.

(೮) ಮಂತ್ರದ ಋಷಿ, ದೇವತೆ, ಛಂದಸ್ಸುಗಳನ್ನು ತಿಳಿಯದೆ ಮಂತ್ರವನ್ನು ಪಠನಮಾಡುವವನು ನರಕದಲ್ಲಿ ಬೀಳುತ್ತಾನೆ ಎಂದು ಕರ್ಮಕಾಂಡದಲ್ಲಿ ತಿಳಿದುಬರುತ್ತದೆ. ವೇದಾಂತಕ್ಕೆ ಇಂಥ ಭೀತಿ ಯೇನೂ ಇಲ್ಲವಾದರೂ ಈ ವಿಷಯ ತಿಳಿಯುವುದರಿಂದ ಉಪಯೋಗವೇ ಇದೆ. ಇಲ್ಲಿ ಋಷಿ ನಾರಾಯಣ ಇದರ ಅರ್ಥ ಹೀಗೆ: ಇವನು ನಾರಾ-ಯಣನ ಸ್ವರೂಪ ಹೊಂದಿದ ಒಬ್ಬ ಅಹಂ—ಶೂನ್ಯ ಋಷಿ ಇವನ ಹೆಸರು ತಿಳಿದು ಬಂದಿಲ್ಲ. ಎಂದರೆ ಆತ ತನ್ನ ಹೆಸರನ್ನು ಅಳಿಸಿ ಹಾಕಲು ಶಕ್ತನಾಗಿದಾನೆ ಕೆಲವರು 'ದಧ್ಯಙ್ ಅಥರ್ವಣ' ಎಂಬ ವನು ಈ ಋಷಿಯೆನ್ನುತ್ತಾರೆ ಇವನು ಮಧುವಿದ್ಯೆಯ ದ್ರಷ್ಟೃ ಎಂದು ಬೃಹದಾರಣ್ಯಕದಲ್ಲಿ ಹೇಳಿದೆ (ಬೃ. ೨-೫-೧೬ ರಿಂದ ೧೯). ಈಶಾವಾಸ್ಯ ಎಲ್ಲಾ ಉಪನಿಷತ್ತುಗಳ ಜೇನುತುಪ್ಪವಾಗಿರುವಾಗ ಈ ಕಲ್ಪನೆಯೂ ಒಪ್ಪುವುದಾಗಿದೆ. ಅಲ್ಲದೆ 'ತ್ಯಕ್ತೇನ ಭುಂಜೀಥಾಃ' ಎಂಬ ತಿಳಿವನ್ನು ದಧೀಚಿಯುಂಥ ತ್ಯಾಗಮೂರ್ತಿಯ ಬಾಯಿಂದ ಕೇಳುವುದೂ ಹೆಚ್ಚು ಸ್ವಾರಸ್ಯವೇ ಆಹುದು. ದೇವತೆ ಪರಮಾತ್ಮ; ಛಂದಸ್ಸು ಅನುಷ್ಟುಬ್ ಮತ್ತು ತ್ರಿಷ್ಟುಬ್, ಆದರೆ ನ್ಯೂನವಾದದ್ದು. ೧೩ ಮಂತ್ರಗಳು ಅನುಷ್ಟುಬ್‌ನಲ್ಲೂ ೫ ತ್ರಿಷ್ಟುಬ್‌ನಲ್ಲೂ ಇವೆ. ಇದರಲ್ಲಿ ೮, ೧೬ ನೆಯ ಮಂತ್ರಗಳು ನ್ಯೂನವಾದ ತ್ರಿಷ್ಟುಬ್ ಇದರ ನಿದರ್ಶನ ಆ ಮಂತ್ರಗಳ ಕೆಳಗಿನ ವ್ಯಾಖ್ಯೆಯಲ್ಲಿಯೇ ಇದೆ

# ಈಶಾವಾಸ್ಯೋಪನಿಷತ್

## ಶಾಂತಿಮಂತ್ರ

**ಓಂ । ಪೂರ್ಣಮದಃ ಪೂರ್ಣಮಿದಂ**
**ಪೂರ್ಣಾತ್ ಪೂರ್ಣಮುದಚ್ಯತೇ ॥**
**ಪೂರ್ಣಸ್ಯ ಪೂರ್ಣಮಾದಾಯ**
**ಪೂರ್ಣಮೇವಾವಶಿಷ್ಯತೇ ॥**
**ಓಂ ಶಾಂತಿಃ ಶಾಂತಿಃ ಶಾಂತಿಃ**

ಪದಪಾಠ — **ಪೂರ್ಣಂ, ಅದಃ, ಪೂರ್ಣಂ, ಇದಂ, ಪೂರ್ಣಾತ್, ಪೂರ್ಣಂ, ಉದಚ್ಯತೇ । ಪೂರ್ಣಸ್ಯ, ಪೂರ್ಣಂ, ಆದಾಯ, ಪೂರ್ಣಂ ಏವ, ಅವಶಿಷ್ಯತೇ ॥**

**ಅರ್ಥ :—** ಅದು ಪೂರ್ಣ, ಇದೂ ಪೂರ್ಣ ಪೂರ್ಣದಿಂದ ಪೂರ್ಣವು ನಿಷ್ಪನ್ನವಾಗುತ್ತದೆ ಪೂರ್ಣದಿಂದ ಪೂರ್ಣವನ್ನು ತೆಗೆದಾಗಲೂ ಪೂರ್ಣವೇ ಶೇಷವಾಗಿ ನಿಲ್ಲುತ್ತದೆ

### ಟಿಪ್ಪಣಿ

(೯) "ಪೂರ್ಣಸ್ಯ ಪೂರ್ಣಮಾದಾಯ" ಇತ್ಯಾದಿ ವಿಚಾರವನ್ನು ಮೇಲೆಮೇಲೆ ನೋಡಿದರೆ ವಿಚಿತ್ರವಾಗಿ ಕಾಣಬರುತ್ತದೆ. ಆದರೆ ಗಣಿತ-ಶಾಸ್ತ್ರ ಇದನ್ನೇ ಅಕ್ಷರಶಃ ಒಪ್ಪುತ್ತದೆ ಪೂರ್ಣಶಬ್ದದ ಬದಲು ಗಣಿತ-ಶಾಸ್ತ್ರ 'ಅನಂತ' ಎನ್ನುತ್ತದೆ ಅಷ್ಟೆ

(೧೦) ವಿಶ್ವೇಶ್ವರನು ಪೂರ್ಣ ವಿಶ್ವವೂ ಪೂರ್ಣ. ಪೂರ್ಣದಿಂದ ಪೂರ್ಣವು ಉತ್ಪನ್ನವಾಗಿದೆ ಉತ್ಪತ್ತಿಯಿಂದ ಪೂರ್ಣನು ವೃದ್ಧಿಯಾಗುವುದಿಲ್ಲ. ಪ್ರಳಯದಿಂದ ಕುಗ್ಗುವುದೂ ಇಲ್ಲ ಹೀಗೆ ಈ ಪೂರ್ಣನ ಆಟ ನಡೆದುಬಂದಿದೆ ಇಷ್ಟು ದರ್ಶನವುಂಟಾಯಿತೆಂದರೆ ಅಶಾಂತಿಗೆ ಕಾರಣವೆ ಇರದು ಎಂತಲೇ ಇದು ಶಾಂತಿ ಮಂತ್ರ !

(೧೧) ಪೂರ್ಣನ ಲೀಲೆಯ ದರ್ಶನವಾದಮೇಲೆ ಅಶಾಂತಿಯು ಕಾರಣ ನಿಲ್ಲದೆ ಹೋದರೂ, ವಿಕಾಸಕ್ಕೆ ಸಂಪೂರ್ಣವಾದ ಅವಕಾಶವಿರುತ್ತದೆ.

ಭಾವದಿಂದ ಜಗತ್ತನ್ನು ಮುಚ್ಚಬೇಕು" ಎಂದು ಶಂಕರಾಚಾರ್ಯರು ಅರ್ಥ ಮಾಡಿದಾರೆ. ಅದು ಒಪ್ಪತಕ್ಕದ್ದು. ಈಗಿನ ಪರಿಸ್ಥಿತಿಯಲ್ಲಿ ಜಗತ್ತೇ ಈಶ್ವರನನ್ನು ಮುಚ್ಚಿಟ್ಟದೆ (ಮಂತ್ರ ೧೫). ಅದರ ಅನ್ವೇಷಣೆಗೋಸ್ಕರ ಈ ಯೋಜನೆಯನ್ನು ಮಾಡಿರುವಂತಿದೆ.

(೧೮) 'ಈಶಾವಾಸ್ಯಮಿದಂ ಸರ್ವಂ' ಇದೇ ಅರ್ಥವನ್ನು ಗೀತೆ "ವಾಸುದೇವಃ ಸರ್ವಮಿತಿ" ಎಂದು ತಿಳಿಸುತ್ತದೆ. (ಗೀತಾ. ೭-೧೯). 'ವಾಸು-ದೇವ' ಶಬ್ದಕ್ಕೆ—ಎಲ್ಲ ಕಡೆಯೂ ವಾಸಮಾಡುವ ದೇವ ಎಂದು ನಿರುಕ್ತಿ.

(೧೯) 'ಈಶಾವಾಸ್ಯಮಿದಂ ಸರ್ವಂ' ಇದೆಲ್ಲವೂ ಈಶ್ವರನಿಂದ ತುಂಬಿದೆ. ಹೀಗೆ ಯಾರೋ ತನ್ನ ಕಣ್ಣಮುಂದೆ ಪ್ರತ್ಯಕ್ಷವಾಗಿ ಕಾಣುತ್ತಿರುವುದನ್ನು ವರ್ಣಿಸಿರುವಂತಿದೆ (೧೬ನೆಯ ಮಂತ್ರ). ಎಲ್ಲಾ ಫಿನಾಮಿನನ್ ಮಧ್ಯೆ 'ನೌಮಿನನ್' ವ್ಯಾಪಿಸಿದೆ. ಅಥವಾ ಎಲ್ಲಾ ವಿಶೇಷಗಳಲ್ಲೂ ಅನುಸ್ಯೂತವಾದ ಒಂದು ಸತ್ತಾ ಸಾಮಾನ್ಯ ಇದೆ. ಇದೆಯೆಂಬುದು ಶಾಬ್ದಿಕವಾದುದು ಅಥವಾ ತಾರ್ಕಿಕವಾದುದು ಅಲ್ಲ. ಸತ್ತಾ ಸಾಮಾನ್ಯದ ತರ್ಕದಿಂದ ಏನೇ ಆದರೂ 'ಈಶಸಿದ್ಧಿ'ಯಾಗುವುದಿಲ್ಲ.

(೨೦) ಜಗತ್ ಅಂದರೆ ಮರಾಠಿಯಲ್ಲಿ ಅಕ್ಷರಶಃ 'ಜಗಣಾರೇ' ಎಂದರೆ ಜೀವಂತವಾಗಿರುವುದು ಎಂದು. ಜಗತ್ತಿನ ಯಚ್ಚಯಾವದ್ವಸ್ತುವೂ ಜೀವಂತವಾಗಿಯೇ ಇದೆ. ಹಲವು ಕಡೆ ಜೀವನ ಸುಪ್ತವಾಗಿದೆ. ಹಲವೆಡೆ ಪ್ರಕಟವಾಗಿದೆ. ಎಲ್ಲವೂ ಈಶ್ವರನಿಂದ ವಾಸಿಸಲ್ಪಟ್ಟದು, ವ್ಯಾಪ್ತವಾದುದು, ತುಂಬಿದುದು.

(೨೧) 'ಜಗತ್ಯಾಂ ಜಗತ್'—ಈ ಸ್ಥೂಲ ಸೃಷ್ಟಿಯ ಹೊಟ್ಟೆಯಲ್ಲಿ ಸೂಕ್ಷ್ಮ ಜಗತ್ತು ಒಂದು ಅಡಗಿದೆ. ಅಲ್ಲಿ ಈಶ್ವರ ವಿರಾಜಮಾನ. ಹೊರಗಣ ಆವರಣ ಮೋಹಕವಾದ್ದರಿಂದ ಒಳಗಡೆ ಲಕ್ಷ್ಯ ಹೋಗದು. ಆವರಣವನ್ನು ದೂರ ತಳ್ಳಿ ಒಳಗಡೆ ನೋಡಬೇಕಾಗುತ್ತದೆ (ಮಂತ್ರ ೧೫).

(೨೨) "ತೇನ ತ್ಯಕ್ತೇನ ಭುಂಜೀಥಾಃ"— ಭಾವಾರ್ಥವನ್ನು ಮೇಲೆ ಕೊಟ್ಟಿದೆ. ಪದಶಃ ಅರ್ಥ ಸ್ವಲ್ಪ ಅಡಚಣೆಯದಾಗಿದೆ. ಒಂದು ರಚನೆ ಹೀಗಿದೆ:

ತೇನ (ತಸ್ಮಾತ್) ತ್ಯಕ್ತೇನ (ತ್ಯಾಗೇನ) ಭುಂಜೀಥಾಃ |

ಎರಡನೆಯ ರಚನೆ—

ತ್ಯಕ್ತೇನ (ಪರಿತ್ಯಕ್ತೇನ) ತೇನ (ಜಗತಾ) ಭುಂಜೀಥಾಃ |

ಮೂರನೆಯ ರಚನೆ—'ಸತಿ' ಸಪ್ತಮಿಾ ಧಾಟಿಯಂತೆ 'ಸತಾ' ಎಂದು ತೃತೀಯೆಯನ್ನಿಟ್ಟು–ತೇನ (ಜಗತಾ) ತ್ಯಕ್ತೇನ (ಪರಿತ್ಯಕ್ತೇನ) ಸತಾ ಭುಂಜೀಥಾಃ |

ನಾಲ್ಕನೆಯ ರಚನೆ—

ತೇನ (ಈಶೇನ) ತ್ಯಕ್ತೇನ (ದತ್ತೇನ) ಭುಂಜೀಥಾಃ ||

ಈ ಇಷ್ಟು ರಚನೆಗಳನ್ನು ನೇರಿಸಿದರೂ ಭಾವಾರ್ಥದಲ್ಲಿ ವಿಶೇಷ ವ್ಯತ್ಯಾಸ ಯಾವುದೂ ಆಗದು. ಇದರಲ್ಲಿ ಮೊದಲನೆಯ ರಚನೆಯೇ ಬಹಳ ಸರಳ ಎಂದು ಕಂಡುಬರುತ್ತದೆ. ಉಳಿದ ರಚನೆಯನ್ನೂ ತೆಗೆದು ಕೊಳ್ಳಲು ಅಡ್ಡಿಯಿಲ್ಲ. ಈ ಎಲ್ಲ ರಚನೆಗಳಲ್ಲೂ ಭುಂಜೀಥಾಃ ಶಬ್ದದ ಅರ್ಥವನ್ನು ಬದಲಿಸಿಲ್ಲ. ಅದನ್ನೂ ಬದಲಿಸಿ ಅರ್ಥಮಾಡಬಹುದು. ಆದರೆ ಅದು ಅಪ್ರಧಾನ ಮತ್ತು ಅನವಶ್ಯಕ.

(೨ಇ) ಈಶ್ವರನ ಸತ್ತೆ (ಪ್ರಭುತ್ವ) ಯನ್ನು ಸ್ವೀಕಾರಮಾಡಿದರೆ ಮನುಷ್ಯನ ಸ್ವಾಮಿತ್ವ ಸಹಜವಾಗಿಯೆ ನಿರಸನವಾಗುತ್ತದೆ ಅದನ್ನೇ 'ತೇನ ತ್ಯಕ್ತೇನ ಭುಂಜೀಥಾಃ' – ಈ ವಾಕ್ಯದಲ್ಲಿ ಸ್ಪಷ್ಟವಾಗಿ ಹೇಳಿದೆ. ಗೀತೆಯ ೯ನೆಯ ಅಧ್ಯಾಯದ ರಾಜವಿದ್ಯೆ ಇದೇ. ಇಲ್ಲಿ ವಿಧಿಸಿರುವುದು ಭೋಗವಲ್ಲ; ತ್ಯಾಗ ವಸ್ತುತಃ ಭೋಗ ತ್ಯಾಗಗಳ ಭೇದವೇ ಇಲ್ಲ ದಂತಾಗಲು ಇದು ಯುಕ್ತಿ.

(೨ಳ) ಈಶ್ವರನ ಪ್ರಭುತ್ವವನ್ನು ಅರಿತು ತ್ಯಾಗ-ವೃತ್ತಿಯನ್ನು ಸ್ವೀಕರಿಸಿದರೆ ಇತರರ ಭೋಗವೃತ್ತಿಯನ್ನು ಕಂಡು ಅಸೂಯೆಪಡುವ ಕಾರಣವೆ ಇರುವುದಿಲ್ಲ ಇದನ್ನೇ, ಮಾಗೃಧಃ ಕಸ್ಯಸ್ವಿದ್ಧನಮ್'–ಈ ವಾಕ್ಯದಲ್ಲಿ ಹೇಳಿದೆ.

(೨೫) ವೈದಿಕ ವಾಙ್ಮಯದಲ್ಲಿ ಸಾಮಾನ್ಯತಃ "ಗೃಧ್" ಧಾತು ಅಕರ್ಮಕವಾಗಿರುವುದರಿಂದಲೂ 'ಕಃ' ಮತ್ತು 'ಸ್ವಿತ್' ಪದಗಳು ಪ್ರಶ್ನಾರ್ಥಕವಾಗಿರುವುದರಿಂದಲೂ ಇಲ್ಲಿ 'ಮಾ ಗೃಧಃ' ಮತ್ತು 'ಕಸ್ಯ ಸ್ವಿತ್ ಧನಂ ?' ಎಂದು ಎರಡು ವಾಕ್ಯಗಳಿರುವ ಸಂಭವವಿದೆ. ಆ ರೀತಿ ಯಾಗಿ ತೆಗೆದುಕೊಂಡರೆ ಅರ್ಥ ಹೀಗಾಗುವುದು.—"ತೃಷ್ಣೆ ಬೇಡ; (ಕಾರಣ) ಧನ ಯಾರದು ?"

(೨೬) ಗೃಧ್ ಧಾತುವಿನ ರೂಪವೇ 'ಗೃಧಃ". ಇಂಗ್ಲೀಷಿನ Greed ಗ್ರೀಡ್ ಶಬ್ದಕ್ಕೂ ಇದೇ ಮೂಲಧಾತು. 'ಗೃಧ್' ಧಾತುವಿನಿಂದ ಗೃಧ್ರ ಎಂದರೆ ಹದ್ದು ಎಂಬರ್ಥದ ಶಬ್ದವೂ ಬಂದಿದೆ. ವೇದದಲ್ಲಿ ಪರರ ಹಣವನ್ನು ಅಪಹರಿಸುವ ವೃತ್ತಿಗೆ ಗೃಧ್ರವೃತ್ತಿಯೆಂಬ ಯಥಾರ್ಥವಾದ ಹೆಸರನ್ನು ಕೊಟ್ಟಿದಾರೆ.

(೨೭) ಈ ಮಂತ್ರದಲ್ಲಿ ವೈದಿಕ ಧರ್ಮದ ಸರ್ವಸಾರವೂ ತುಂಬಿದೆ.

(೧) ಈಶ್ವರನ ಪ್ರಭುತ್ವದ ಸ್ವೀಕಾರ; ಆದ್ದರಿಂದ
(೨) ಸ್ವತಃ ತ್ಯಾಗವೃತ್ತಿಯಿಂದ ಜೀವಿಸುವುದು; ಎಂದೇ
(೩) ಇತರರ ಭೋಗವೃತ್ತಿಗೆ ಅಸೂಯೆಗೊಳ್ಳದಿರುವುದು.

ಈ ಮೂರೇ ವೈದಿಕಧರ್ಮ. ಸ್ವಾತ್ಮ, ಪರಾತ್ಮ ಮತ್ತು ಪರಮಾತ್ಮ– ಈ ಬಗ್ಗೆ ಕರ್ತವ್ಯ ಇದರಲ್ಲಿ ವ್ಯಕ್ತವಾಗುತ್ತದೆ.

## ೨

ಮಂತ್ರ:—ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇಚ್ಛತಂ ಸಮಾಃ ||
ಏವಂ ತ್ವಯಿ ನಾನ್ಯಥೇತೋಽಸ್ತಿ
ನ ಕರ್ಮ ಲಿಪ್ಯತೇ ನರೇ || ೨ ||

ಪದಪಾಠ:—ಕುರ್ವನ್, ಏವ, ಇಹ, ಕರ್ಮಾಣಿ, ಜಿಜೀವಿಷೇತ್, ಶತಂ, ಸಮಾಃ। ಏವಂ, ತ್ವಯಿ, ನ, ಅನ್ಯಥಾ, ಇತಃ, ಅಸ್ತಿ, ನ, ಕರ್ಮ ಲಿಪ್ಯತೇ, ನರೇ

**ಅರ್ಥ:**— ಈ ಲೋಕದಲ್ಲಿ ಕರ್ಮಗಳನ್ನು ಮಾಡು ಮಾಡುತ್ತಲೇ

ನೂರು ವರ್ಷ ಜೀವಿಸಲು ಇಚ್ಛಿಸಬೇಕು. ದೇಹಧಾರಿಯಾದ ನಿನಗೆ ಇದೇ ಮಾರ್ಗ. ಇದಲ್ಲದೆ ಬೇರಾವ ಹಾದಿಯೂ ಇಲ್ಲ. ಮನುಷ್ಯನಿಗೆ ಕರ್ಮ (ಫಲವಾಸನೆ) ಅಂಟುವುದಿಲ್ಲ.

## ಟಿಪ್ಪಣಿ

(೨೮) ಪರಧನಾಕಾಂಕ್ಷೆಯೆಂದರೆ, 'ಅವರ ಕೈ ಕೆಸರು ನನ್ನ ಬಾಯಿ ಮೊಸರು' ಎಂಬ, ಪರಿಶ್ರಮದಿಂದ ಪಾರಾಗುವ ವೃತ್ತಿ. ಇದಕ್ಕೆ ವಿರುದ್ಧವಾದ (ಪ್ರತಿಪಕ್ಷಿ) ಕರ್ಮನಿಷ್ಠೆಯ ವಿಧಿ ಪ್ರವಾಹತಃ ಪ್ರಾಪ್ತವಾಗುತ್ತದೆ. ಅದಕ್ಕೆಂದೇ ಈ ಮಂತ್ರ.

(೨೯) ' ಕುರ್ವನ್ ಏವ ಜಿಜೀವಿಷೇತ್ '. ಕರ್ಮಯೋಗವನ್ನು ತೊರೆದವನಿಗೆ ಜೀವಿಸುವ ಅಧಿಕಾರವೇ ಇಲ್ಲ – ಎಂದು ಶ್ರುತಿ ಸೂಚಿಸುತ್ತಿದೆ. ಕರ್ಮಯೋಗವೇ ಜೀವನ. ಅಕರ್ಮಣ್ಯತೆಯೇ ಮರಣ.

(೩೦) 'ಇಹ' ಎಂದರೆ ಈ ಲೋಕದಲ್ಲಿ, ಐಹಿಕ ಜೀವನ ಪಾರಮಾರ್ಥಿಕ ದೃಷ್ಟಿಗೆ ಮೂಲ್ಯಭೂತವಾದುದು. ಕಾರಣ–ಈ ಲೋಕದ ಜೀವನ ಪರಮಾರ್ಥದ ಒಂದು ಒರೆಗಲ್ಲು. ಯಾರು ಇಹದಲ್ಲಿ ಪಾವನರಲ್ಲವೋ ಅವರನ್ನು ಪರದಲ್ಲಿ ಕೇಳುವುದೇನಿದೆ? ಇಲ್ಲಿ ಸಲ್ಲದವರು ಅಲ್ಲಿ ಸಲ್ಲುವರೆ? ಮುಂದಿನ ಮಂತ್ರ ಇದನ್ನೇ ವಿವರಿಸುತ್ತದೆ.

(೩೧) " ಜಿಜೀವಿಷೇತ್ " ಇದರಲ್ಲಿ ಬದುಕುವ ಇಚ್ಛೆಯ ವಿಧಿಯಿಲ್ಲ. ಕರ್ಮ ಮಾಡುವುದರ ವಿಧಿಯಿದೆ. ಅದು ಬದುಕಬೇಕೆಂಬ ಇಚ್ಛೆಯನ್ನು ಅವಲಂಬಿಸಿದೆ. ಬದುಕುವ ಆಸೆ ನನಗೆ ಇರುವಂತೆಯೇ ಬೇರೊಬ್ಬನಿಗೂ ಇರುತ್ತದೆ. ಇದರ ಬೋಧೆ ಇಲ್ಲಿ ಸೂಚಿತವಾಗಿದೆ.

(೩೨) " ಜಿಜೀವಿಷೇತ್ ಶತಂ ಸಮಾಃ " ಕರ್ಮಯೋಗ ನಿಷ್ಠೆಯಲ್ಲಿ ಮಾನವ ಸಮಾಜ ಶತಂ–ಜೀವಿಯಾಗಲು ಅಪೇಕ್ಷಿಸುವುದು ಸಾಧ್ಯ. ಹಲವರು ಕೆಲಸವನ್ನು ಸುತರಾಂ ಮಾಡರು. ಈ ಕಾರಣದಿಂದ ಇತರರ ಮೇಲೆ ಹೆಚ್ಚಾದ ದುಡಿತ ಬೀಳುತ್ತದೆ. ಹೀಗಾಗಿ ಇಬ್ಬರ ಆಯುಷ್ಯವೂ ಕಡಿಮೆಯಾಗುತ್ತದೆ.

(೩೩) ನೂರು ನಿಂಬೆಯ ಹಣ್ಣಿಗೆ ೧೨೦ ರಂತೆಯೂ ನೂರು ರತ್ತಲಿಗೆ ೧೧೨ ರಂತೆಯೂ, ಶತನಾಮಸ್ಮರಣಕ್ಕೆ ೧೦೮ ರಂತೆಯೂ ಲೆಕ್ಕ ಹಿಡಿಯುವಂತೆ ಆಯುಮಾನದ ಶತಮಾನವನ್ನು ೧೧೬ ಎಂದು ಹಿಡಿಯಬೇಕೆಂಬ ವಾತವನ್ನು ಘೋರ ಆಂಗೀರಸ ಋಷಿ ಶ್ರೀಕೃಷ್ಣನಿಗೆ ಹೇಳಿರುವುದು ಉಪನಿಷತ್ತುಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ (ಛಾಂದೋಗ್ಯ ೩–೧೬). ಮೊದಲ ೨೪ ವರ್ಷ ಅಧ್ಯಯನ, ಮಧ್ಯದ ೪೪ ವರ್ಷ ಕರ್ಮಯೋಗ, ಅಂತ್ಯದ ೪೮ ವರ್ಷ ಧ್ಯಾನ; ಇದು ಯೋಜನೆ.

(೩೪) "ಅ–ದೀನಾಃ ಸ್ಯಾಮ ಶರದಃ ಶತಮ್." ದೀನನಾಗದೆ ನೂರು ವರ್ಷ ಜೀವಿಸೋಣ–ಹೀಗಿದೆ ವೇದಗಳ ಬೋಧೆ "ಕುರ್ವನ್ನೇವೇಹ ಕರ್ಮಾಣಿ"–ಯ ಮಧ್ಯೆ ಇದು ಸೂಚಿತವಾಗಿದೆ

(೩೫) "ತ್ವಯಿ". 'ನೀನು' ಎಂದು ಸಂಬೋಧಿಸಿ ತಾಯಿ ಮಗುವಿಗೆ ಆಜ್ಞೆಮಾಡುತ್ತಾಳೆ. ಆ ರೀತಿಯಲ್ಲಿ ಇದರಲ್ಲಿ ಮತ್ತು ಮುಂದಿನ ಮಂತ್ರದಲ್ಲಿ ಶ್ರುತಿ ನಮಗೆ ಪ್ರತ್ಯಕ್ಷವಾಗಿ ಆಜ್ಞೆ ಮಾಡಿದೆ. ಇತರ ಸರ್ವ ಸಾಮಾನ್ಯ ಜ್ಞಾನವನ್ನು ಕೊಡುವ ವಚನಗಳಿಗಿಂತ ಸಹಜವಾಗಿ ಇಂಥ ವಚನಗಳು ಹೆಚ್ಚು ಬಲವುಳ್ಳವು ಎಂದು ತಿಳಿಯಲ್ಪಡುತ್ತವೆ.

(೩೬) "ಇತಃ" ಎಂದರೆ ದೇಹವಿರುವವರೆಗೆ ಎಂದರ್ಥ. ದೇಹ ಇರುವವರೆಗೆ ಕರ್ಮಯೋಗವಲ್ಲದೆ ಬೇರೆ ಮಾರ್ಗವಿಲ್ಲ ಕಾರಣ–

ನಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ— ಗೀತಾ. ೧೮–೧೧.

(೩೭) "ನ ಕರ್ಮ ಲಿಪ್ಯತೇ ನರೇ" ಮನುಷ್ಯನಿಗೆ ಕರ್ಮ ಅಂಟಲು ಸಾಧ್ಯವೇ ಇಲ್ಲ. ಇದು ಒಂದು ಮಹಾ ಸಿದ್ಧಾಂತ. ಕರ್ಮ ಜಡ, ಮನುಷ್ಯ ಚೇತನ. ಎಂದಮೇಲೆ ಅದು ಅಂಟುವುದಾದರೂ ಹೇಗೆ? ಆದರೆ ಮನುಷ್ಯ ತಾನೇ ಆ ಜಡವಾಗಿ ಅದನ್ನು ಅಂಟಿಸಿಕೊಂಡರೆ ಆ ಮಾತೇ ಬೇರೆ.

(೩೮) 'ನರೇ' = ನೇತರಿ. ವ್ಯುತ್ಪತ್ತಿಯಲ್ಲಿ ನರಶಬ್ದ ನೇತೃತ್ವ-ಸೂಚಕವೆಂದು ಪರಿಗಣಿಸಲ್ಪಟ್ಟಿದೆ. ಮನುಷ್ಯ ಕರ್ಮಕ್ಕೆ ನೇತಾ.

ಕರ್ಮಕ್ಕೆ ಆಕೃತಿಕೊಡುವಂಥವನು. ಎಂದಮೇಲೆ ಕರ್ಮ ಅವನನ್ನು ಹೇಗೆ ಬಂಧಿಸೀತು ಎಂಬುದೇ ಭಾವಾರ್ಥ. 'ನ ಮಾಂ ಕರ್ಮಾಣಿ ಲಿಂಪಂತಿ' ಎಂದು ಭಗವಂತ ಹೇಳಿದಾನೆ (ಗೀತಾ-೪-೧೪). ನರ ಅದನ್ನೇ ಅನುಭವಿಸಿ ತಿಳಿಯಬೇಕು.

(೩೯) ಪ್ರಸ್ತುತ ಮಂತ್ರದ ಕರ್ಮನಿಷ್ಠೆಯ ವಿಧಿ ಜ್ಞಾನಿಯಾದವನಿಗೆ ಅನ್ವಯಿಸುತ್ತದೆಯೆ? ಬ್ರಹ್ಮಸೂತ್ರಗಳಲ್ಲಿ ಈ ವಿಷಯದ ಚರ್ಚೆ ಬಂದಿದೆ. "ವಿಧಿ ಕೇವಲ ಜ್ಞಾನಿಗೆಂದೇ ಹೇಳಲ್ಪಟ್ಟಿದೆ. ಜ್ಞಾನಿ ಆ ರೀತಿಯಾಗಿ ಆಚರಿಸಿದರೆ ಏನೂ ಬಾಧಕವಿಲ್ಲ. ಅದರಿಂದ ಆತನ ಜ್ಞಾನಕ್ಕೆ ಒಂದು ವರಿಯ ಗೌರವವೂ ಉಂಟಾಗುತ್ತದೆ. ಆತನ ಕರ್ಮಲೇಪರಹಿತವಾದ ಸ್ಥಿತಿ ಅದರಿಂದ (ಎಂದರೆ ಹಾಗೆ ಕರ್ಮಮಾಡುವುದರಿಂದ) ಎದ್ದು ಕಾಣಿಸೀತು. (ಬ್ರಹ್ಮಸೂತ್ರ ಅಧ್ಯಾಯ ೩, ಪಾದ ೪, ಸೂತ್ರಗಳು ೧೩-೧೪).

(೪೦) ಕರ್ಮಯೋಗವನ್ನು ತಿಳಿಸಿಕೊಡುವಂಥ ಗೀತೆಯ ವಾಕ್ಯ. ಗೀತೆಗಿಂತ ಪೂರ್ವದಲ್ಲಿ ಇದಕ್ಕಿಂತ ಸ್ಪಷ್ಟವಾದುದು ಸಿಗುವುದಿಲ್ಲ.

## ೩

ಮಂತ್ರ:—ಅಸುರ್ಯಾ ನಾಮ ತೇ ಲೋಕಾ
ಅಂಧೇನ ತಮಸಾವೃತಾಃ ||
ತಾಂಸ್ತೇ ಪ್ರೇತ್ಯಾಭಿಗಚ್ಛಂತಿ
ಯೇ ಕೇ ಚಾತ್ಮಹನೋ ಜನಾಃ || ೩ ||

ಪದಪಾಠ:— ಅಸುರ್ಯಾಃ, ನಾಮ, ತೇ, ಲೋಕಾಃ, ಅಂಧೇನ, ತಮಸಾ, ಆವೃತಾಃ । ತಾನ್, ತೇ, ಪ್ರೇತ್ಯ, ಅಭಿಗಚ್ಛಂತಿ, ಯೇ, ಕೇ, ಚ, ಆತ್ಮಹನಃ, ಜನಾಃ ||

**ಅರ್ಥ:**—ಆತ್ಮಜ್ಞಾನದ ಶತ್ರುಗಳಾದ ಆತ್ಮಘ್ನ ಮನುಷ್ಯರು ದೇಹನಾಶವಾದಮೇಲೆ ಗಾಢ ಅಂಧಕಾರದಿಂದ ಆವರಿಸಿದ ಆಸುರೀ ಎಂಬ ಹೆಸರುಳ್ಳ ಯೋನಿಯನ್ನು ಹೊಂದುತ್ತಾರೆ.

## ಟಿಪ್ಪಣಿ

(೪೧) "ಆತ್ಮಹನಃ" ಆತ್ಮಘಾತಕಿ, ಎಂದರೆ ಮೇಲೆ ಹೇಳಿದ ಎರಡು ಮಂತ್ರಗಳ ಪಾಠವನ್ನು ಗೌರವಿಸದ, ಎಂದರೆ ಭಕ್ತಿ-ವಿಹೀನ, ಭೋಗಪರಾಯಣ, ಲೋಭಿ, ಅಕರ್ಮಣ್ಯ ಮನುಷ್ಯರು.

(೪೨) 'ಆತ್ಮಹನಃ' ಇದು ಔಪಚಾರಿಕ ಪ್ರಯೋಗ. ವಸ್ತುತಃ ಆತ್ಮದ ಘಾತ ಎಂದೂ ಆಗದು. ಯಾರ ಶಕ್ತಿಯೂ ಅದರ ಮೇಲೆ ನಡೆಯುವಂತಿಲ್ಲ. ತದ್ವ್ಯತಿರೇಕವಾಗಿ ಎಲ್ಲರ ಎಲ್ಲಾ ಶಕ್ತಿಯೂ ಅದರಲ್ಲಿ ಅಧಿಷ್ಠಿತವಾಗಿದೆ (ಮಂತ್ರ ೪). ಆದರೂ ಬುದ್ಧಿಯ ಉಪಾಧಿಯನ್ನು ಲಕ್ಷ್ಯದಲ್ಲಿಟ್ಟು ಬುದ್ಧಿಯ ನಾಶವಾಯಿತೆಂದರೆ ಆತ್ಮನಾಶ ಆಯಿತೆಂದು ಹೇಳುವುದು ರೂಢಿ (ಗೀತಾ. ೨-೬೩). "ತದ್ಗುಣಸಾರತ್ವಾತ್ತು ತದ್ವ್ಯಪ-ದೇಶಃ" ಎಂದರೆ ಬುದ್ಧಿಗುಣಾನುಸಾರ ಆತ್ಮ ಸಂಬಂಧಿ ಭಾಷೆ ಬಳಸಲ್ಪಟ್ಟಿದೆ ಎಂದು ಏತದ್ವಿಷಯಕ ನ್ಯಾಯ ಬ್ರಹ್ಮಸೂತ್ರಗಳಲ್ಲಿ ಬಂದಿದೆ. (ಬ್ರಹ್ಮ. ೨-೩-೨೯).

(೪೩) "ಜನಾಃ" ಎಂದರೆ ಕೇವಲ ಜನ್ಮತಾಳಿದ ಮಾತ್ರಕ್ಕೆ ನರ ಜನ್ಮ ಸಫಲವಾಗದು. ನರ 'ನಾರಾಯಣ' ನಾಗಲು ಸಾಧ್ಯ. ಅದಕ್ಕಾಗಿಯೇ "ಜನ" ಎಂದಿದೆ. ಎಂದರೆ 'ಜಂತು' ಕೋಟಿಯವರು.

(೪೪) ಮನುಷ್ಯಜನ್ಮ ಆತ್ಮಜ್ಞಾನ ಪ್ರಾಪ್ತಿಗಾಗಿಯೆ. ಆದರ ಮೇಲೆ ಯಾರು ಕುಠಾರ ಪ್ರಯೋಗಮಾಡಿ, ಮನುಷ್ಯ ಜನ್ಮದ ಅಧಿಕಾರವನ್ನೇ ಮರೆಮಾಡಿ, ದೀರ್ಘಕಾಲ ಆತ್ಮಜ್ಞಾನದ ಮಾರ್ಗವನ್ನೇ ತಡೆಗಟ್ಟುತ್ತಾರೋ – ಹೀಗೆಂದು ಈ ಮಂತ್ರದ ಅರ್ಥ. ಎರಡನೆಯ ಮಂತ್ರದ ನಡುವೆ 'ನರೇ' ಎಂಬ ಪದದಿಂದ ಇದೇ ಅರ್ಥವನ್ನು ಸೂಚಿಸಿದೆ.

(೪೫) "ಅಸುರ್ಯಾಃ" ಇದಕ್ಕೆ ಬದಲಾಗಿ 'ಅನಂದಾಃ' ಎಂಬ ಪಾಠಭೇದ ಬೃಹದಾರಣ್ಯಕದಲ್ಲಿ (೪-೪-೧೧), ಕಠದಲ್ಲಿ (೧-೩) ಸಿಗುತ್ತದೆ. ಅದರ ಅರ್ಥ ಆನಂದಶೂನ್ಯ ಎಂದರೆ ದುಃಖಮಯ ಎಂದು.

(೪೬) "ಅಸುರ್ಯ" ಗೆ ಬದಲು "ಅಸೂರ್ಯಾಃ" ಎಂಬ

ಪಾಠಭೇದವೂ ಕಂಡುಬಂದಿದೆ. ಅದರ ಅರ್ಥ—ಸೂರ್ಯರಹಿತ ಎಂದರೆ ದರ್ಶನರಹಿತ ಎಂದು. ಎರಡನೆಯ ಚರಣದಲ್ಲಿ ಹೇಳಿರುವಂತೆ—ಅಂಧೇನ ತಮಸಾವೃತಾಃ.

(೪೭) ದೇಹದಿಂದ ಆತ್ಮದ ಭಿನ್ನತ್ವವನ್ನು ಗಮನಕ್ಕೆ ತಂದು ಕೊಂಡರೆ, ಅಜ್ಞಾನಿಯಾದ ಜೀವನ ಮರಣಾನಂತರದ ಪ್ರಶ್ನೆ ಉದ್ಭವಿಸುತ್ತದೆ. ಅವನು ಜಡಸೃಷ್ಟಿಯಲ್ಲಿ ಲೀನನಾಗನು. ಏಕೆಂದರೆ ಅವನು ಚೇತನ. ಈಶ್ವರನಲ್ಲೂ ಐಕ್ಯತೆಹೊಂದನು. ಕಾರಣ, ಇನ್ನೂ ಅವನಿಗೆ ಆತ್ಮಜ್ಞಾನವಾಗಿಲ್ಲ. ಎಂದಮೇಲೆ ಅವನಿಗೆ ತನ್ನ ವಿಶಿಷ್ಟ ಅಹಂಭಾವದಿಂದ ಸೃಷ್ಟಿ, ಈಶ್ವರ ಎರಡರಿಂದಲೂ ಪೃಥಕ್ ಆಗಿ ಇರುವ ಪಾತ್ರವಿದೆ.

(೪೮) 'ಆಸುರೀಯೋನಿ.' ಇದನ್ನು ಗೀತೆ 'ಮೂಢಯೋನಿ' ಎನ್ನುತ್ತದೆ. ಮೂಢಯೋನಿ ಎಂದರೆ ಇಲ್ಲಿಯ ಮಾತಿನಲ್ಲಿ ಕತ್ತಲಿನಿಂದ ಕವಿದದ್ದು, ಅರ್ಥಾತ್ ಪಶು ಮುಂತಾದ ಯೋನಿಯೆಂದು ತಿಳಿಯತಕ್ಕದ್ದು. ಇದು ಪಾಪದಿಂದ ಲಬ್ಧವಾದುದೆಂದು ಕಲ್ಪಿಸಿ ಪಾಪಯೋನಿಯೆಂದೂ ಹೇಳುವುದುಂಟು.

(೪೯) 'ಯೋನಿ' ಎಂಬುದರ ಅರ್ಥದ ಜತೆಗೆ ಇಲ್ಲಿ 'ಲೋಕ' ಎಂಬುದನ್ನು ಯೋಜಿಸಿದೆ. ಅದರ ಮೂಲ ಅರ್ಥ ಪ್ರಕಾಶ. 'ಲೋಚನ', ಆಂಗ್ಲಭಾಷೆಯ 'ಲುಕ್' (Look) ಇವೆರಡೂ ಇದರಿಂದಲೇ ಬಂದಿವೆ. ಎಷ್ಟೇ ಕತ್ತಲುಕವಿದ ಯೋನಿಯಾಗಿದ್ದರೂ ಸ್ವಲ್ಪವಾದರೂ ಪ್ರಕಾಶವಿದ್ದೇ ಇರುತ್ತದೆ.

(೫೦) ಯಾರಿಗೂ ಆತ್ಯಂತಿಕ ವಿನಾಶ ಸಾಧ್ಯವಿಲ್ಲ. ಆಸುರೀ ಯೋನಿಯಿಂದಲೂ ಉದ್ಧಾರ ಆಗುವುದಾಗಿ ಶಾಸ್ತ್ರಗಳು ಗಣಿಸಿವೆ. ಅಲ್ಲಿಯೂ ಸ್ವಲ್ಪವಾದರೂ 'ಆಲೋಕ' ಇದ್ದೇ ಇರುತ್ತದೆ. ಅದರ ಆಧಾರದಿಂದ ಪಶ್ಚಾತ್ತಾಪವೂ ಈಶ್ವರನ ಕಡೆಗೆ ಗಮನವೂ ಸಂಭವಿಸುತ್ತವೆ. ಆದರೆ ಮನುಷ್ಯಜನ್ಮವನ್ನು ಮರೆಮಾಡಿದನಂತರ ಇದೆಲ್ಲಾ ಒಂದು ಸುದೀರ್ಘ ಕಾರ್ಯಕ್ರಮವಾಗಿಬಿಡುತ್ತದೆಂದು ಮಾತ್ರ ಹೇಳಬೇಕಾಗುವುದು.

"ಆಸುರೀ ಯೋನಿಯನ್ನು ಹೊಂದಿದವರು ಉತ್ತರೋತ್ತರ ಅಧೋಗತಿಯನ್ನು ಹೊಂದುತ್ತಾರೆ". ಆದರೆ ಅವರು "ಮಾಂ ಅಪ್ರಾಪ್ಯ ಏವ" ಎಂದರೆ ಎಲ್ಲಿಯವರೆಗೆ "ನನ್ನ ಕಡೆ ತಿರುಗರೋ ಅಲ್ಲಿಯವರೆಗೆ' ಎಂದು ಗೀತೆಯಲ್ಲಿ ಈ ವಿಷಯವನ್ನು ಸೂಚಿಸಿದೆ (ಗೀತಾ ೧೬-೨೦) ಈ ಸಕಲ ಅರ್ಥವೂ "ಅಭಿಗಚ್ಛಂತಿ" ಎಂಬ ಪದದಲ್ಲಿ ಅಡಕವಾಗಿದೆ "ಅಭಿಗಚ್ಛಂತಿ" ಎಂದರೆ "ಅಭಿಮುಖಾಃ ಗಚ್ಛಂತಿ" (ಅಭಿಮುಖರಾಗುತ್ತಾರೋ) ಯಾರು ಪತನದ ಕಡೆ ಅಭಿಮುಖರಾಗುತ್ತಾರೋ ಅವರು ಉತ್ಥಾನದ ಕಡೆಯೂ ಅಭಿಮುಖರಾಗಲು ಶಕ್ತಿಹೊಂದಿರುತ್ತಾರೆ ಎಂಬ ಸೂಚನೆ ಇಲ್ಲಿದೆ

(೫೧) ನಾಲ್ಕನೆಯ ಚರಣದ ಪರ್ಯಾಯ "ಅವಿದ್ವಾಂಸೋ ಅಬುಧೋ ಜನಾಃ" ಎಂದು ಬೃಹದಾರಣ್ಯಕದಲ್ಲಿದೆ (ಬೃ ೪-೪-೧೧). ಆದೇ "ಆತ್ಮಹನಃ" ಎಂಬುದಕ್ಕೆ ಭಾಷ್ಯ (ವಿವರಣೆ). "ಅವಿದ್ವಸ್" ಮತ್ತು "ಅಬುಧ" ಈ ಎರಡೂ ವಿಶೇಷ ಗುಣಗಳು ಮೊದಲನೆಯ ಎರಡನೆಯ ಮಂತ್ರಗಳ ಜ್ಞಾನ ತಿಳಿಯದವನನ್ನು ಅನುಕ್ರಮವಾಗಿ ಸೂಚಿಸುತ್ತವೆ.

(೫೨) ಈ ಮಂತ್ರದಲ್ಲಿನ ವಿಚಾರವನ್ನು ವಿಸ್ತೃತವಾಗಿ ಗೀತೆಯ ೧೬ನೆಯ ಅಧ್ಯಾಯದಲ್ಲಿನ "ಅಸುರ–ಚರಿತ್ರೆ" ಯಲ್ಲಿ ಮಾಡಿದೆ

(೫೩) ಮೂರು ಮಂತ್ರಗಳ ಈ ಮೊದಲನೆಯ ತ್ರಿಕೆಯಲ್ಲಿ ಜೀವನ-ದರ್ಶನ ಸಂಪೂರ್ಣವಾಗಿ ಆಗಿದೆ. ಮೊದಲನೆಯ ಮಂತ್ರದಲ್ಲಿ ಈಶ್ವರ-ನಿಷ್ಠೆ, ಎರಡನೆಯದರಲ್ಲಿ ತದನುಸಾರಿಣಿಯಾದ ಕರ್ಮಯೋಗನಿಷ್ಠೆ, ಮೂರನೆಯದರಲ್ಲಿ ಉಭಯ ನಿಷ್ಠಾಶೂನ್ಯ, ಆತ್ಮಘಾತಕಿಯಾದ ಆಸುರೀ ವೃತ್ತಿ–ಹೀಗೆ ಜಗತ್ತು ಮೂರು ಬಗೆಯದಾಗಿದೆ.

೪

ಮಂತ್ರ :—ಅನೇಜದೇಕಂ ಮನಸೋ ಜವೀಯೋ
ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ॥
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್
ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ ೪ ॥

ಪದಪಾಠ :—ಅನೇಜತ್, ಏಕಂ, ಮನಸಃ ಜವೀಯಃ, ನ, ಏನತ್, ದೇವಾಃ, ಆಪ್ನುವನ್, ಪೂರ್ವಂ, ಅರ್ಷತ್ । ತತ್, ಧಾವತಃ, ಅನ್ಯಾನ್, ಅತ್ಯೇತಿ, ತಿಷ್ಠತ್, ತಸ್ಮಿನ್, ಅಪಃ, ಮಾತರಿಶ್ವಾ, ದಧಾತಿ.

ಅರ್ಥ :—ಆ ಆತ್ಮತತ್ತ್ವ ಒಂದೇ ಒಂದು. ಸ್ವಲ್ಪವೂ ಚಲನ ವಲನವಿಲ್ಲದುದು, ಆದರೂ ಮನಸ್ಸಿಗಿಂತ ವೇಗವುಳ್ಳದುದು. ದೇವತೆಗಳೂ ಸಹ ಅದನ್ನು ಹೊಂದಲಾರರು. ಓಡುತ್ತಿರುವ ಇತರರನ್ನು ನಿಂತಲ್ಲಿ ನಿಂತೇ ಹಿಂದೆ ಹಾಕುತ್ತದೆ. ಪ್ರಕೃತಿ ಮಾತೆಯ ತೊಡೆಯಮೇಲೆ ಆಡುವ ಪ್ರಾಣ, ಅದರ ಸತ್ತೆಯ ಆಧಾರದಿಂದಲೇ ಚಲನ ವಲನ ಮಾಡುತ್ತಿರುತ್ತದೆ.

## ಟಿಪ್ಪಣಿ

(೫೪) ಮೂರನೆಯ ಮಂತ್ರದಲ್ಲಿ ಉಲ್ಲೇಖಿಸಿದ ಆತ್ಮತತ್ತ್ವದ, ಮೊದಲನೆಯ ಮಂತ್ರದಲ್ಲಿ ವರ್ಣಿಸಿದ ಈಶ್ವರತತ್ತ್ವದ, ವರ್ಣನೆಯನ್ನು ಇಲ್ಲಿ ಮಾಡಿದೆ. ಈಶ, ಆತ್ಮ ಇವುಗಳಲ್ಲಿ ತತ್ತ್ವತಃ ಭೇದವೇನೂ ಇಲ್ಲ. (ಮಂತ್ರ ೧೬). ಈ ಮಂತ್ರದಲ್ಲಿ ನಪುಂಸಕಲಿಂಗದ ಪ್ರಯೋಗವನ್ನು ಈ ತತ್ತ್ವವನ್ನು ಉದ್ದೇಶಿಸಿಯೇ ಮಾಡಿದೆ. ಸಾಮಾನ್ಯವಾಗಿ ಈಶ, ಆತ್ಮ ಈ ಎರಡು ಶಬ್ದಗಳೂ ಪುಲ್ಲಿಂಗದವು. ಈ ತತ್ತ್ವವನ್ನೇ ಬ್ರಹ್ಮವೆನ್ನುತ್ತಾರೆ. (ಟಿಪ್ಪಣಿ ೨೧ಅನ್ನು ನೋಡಿ). ಬ್ರಹ್ಮ ಶಬ್ದ ಮೂಲತಃ ನಪುಂಸಕ.

(೫೫) ಆತ್ಮತತ್ತ್ವದ ಈ ವರ್ಣನೆ ಪರಸ್ಪರ ವಿರೋಧವನ್ನು ತೋರಿಸುವ ವಿಶೇಷಣಯುತವಾಗಿರುವುದರಿಂದ ಸಾಮಾನ್ಯ ತರ್ಕಶಾಸ್ತ್ರಕ್ಕೆ ಅಡಚಣೆಯುಂಟುಮಾಡುವಂತೆ ಕಾಣಬರುತ್ತದೆ. ಸ್ಥಿತಿ–ಗತಿ ಎರಡೂ ಒಂದೇ

ಎಡೆ ಸೇರುವ ಸಂಭವವಿಲ್ಲವೆಂಬುದು ಸಾಮಾನ್ಯ ತರ್ಕದ ನಿಯಮ. ಆದರೆ ಈ ತೆರದ ಪರಸ್ಪರ ವಿರೋಧಿ ದ್ವಂದ್ವಗಳು ಒಂದು ಕಡೆ ಸಮಾವೇಶವಾಗಲು ಸಾಧ್ಯ ಎಂಬುದೇ ವೇದಾಂತದ ವಿಶೇಷ ತರ್ಕ. ಈ ವಿಶೇಷ ತರ್ಕಕ್ಕೇ "ವಿತರ್ಕ" ಎಂಬ ಶಾಸ್ತ್ರೀಯ ಹೆಸರಿದೆ. ಆಂಗ್ಲ ಭಾಷೆಯಲ್ಲಿ ಇದಕ್ಕೆ ಡಯಲೆಕ್ಟಿಕ್ಸ್ (Dialectics) ಎನ್ನುತ್ತಾರೆ. ಈ ರೀತಿಯ ವೈತರ್ಕಿಕ ವಿಚಾರಸರಣಿಯಿಂದ ಜಗತ್ತಿನ ವಿಷಯಗಳ ಜ್ಞಾನವನ್ನು ದೃಢಪಡಿಸಿದರೆ, ಆತ್ಮದಲ್ಲಿ ಮಗ್ನವಾಗಿ ಹೋಗಲು ಸಹಾಯಕವಾದ "ಸಂಪ್ರಜ್ಞಾತ" ಸಮಾಧಿಯೂ ಸಿದ್ಧಿಸುತ್ತದೆ ಎಂದು ಯೋಗಸೂತ್ರಗಳು ಹೇಳುತ್ತವೆ. (ಯೋಗ ೧-೧೭.) ಈ ವಿತರ್ಕ ಪದ್ಧತಿಯನ್ನೇ ಅವಲಂಬಿಸಿ ಈಶೋಪನಿಷತ್ತು ತ್ಯಾಗ, ಭೋಗ ಮುಂತಾದ ಅನೇಕ ದ್ವಂದ್ವಗಳನ್ನು ಒಂದುಗೂಡಿಸಿದೆಯೆಂದು ಕಂಡುಬರುತ್ತದೆ. ಆದರೆ ಈ ವಿತರ್ಕ-ಸರಣಿ ಸಾಮಾನ್ಯ ತರ್ಕಶಾಸ್ತ್ರಕ್ಕೆ ಹಿಡಿಸುವುದಾದರೂ ಹೇಗೆ? ತರ್ಕಶಾಸ್ತ್ರದ ಕಟ್ಟಡದಲ್ಲಿ ಇದನ್ನು ಕೂಡಿಸುವುದು ಹೇಗೆ? ಅದಕ್ಕಾಗಿಯೆ ಮುಂದೆ ವಿಚಾರಶೀಲರು ವಿವರ್ತವಾದದ ಯುಕ್ತಿಯನ್ನು ಶೋಧನೆ ಮಾಡಿಟ್ಟರು. (ಕುವಿಚಾರ ಎಂಬರ್ಥವನ್ನು ಕೊಡುವ 'ವಿತರ್ಕ' ಶಬ್ದ ರೂಢಿಯಲ್ಲಿದೆ. ಅದನ್ನು ಈ ಶಾಸ್ತ್ರೀಯ ಅರ್ಥದ ವಿತರ್ಕದೊಡನೆ ಬೆರೆಸಬಾರದು)

(೫೬) "ಮನಸೋ ಜವೀಯಃ" ಮನಸ್ಸಿನ ಜವ ಅಥವಾ ವೇಗ ಪ್ರಸಿದ್ಧವಾದುದು. ತ್ರಿಕಾಲ, ದಶದಿಕ್ಕುಗಳು, ಅಂತರ್ಬಾಹ್ಯಸೃಷ್ಟಿ, ಅಸೃಷ್ಟಿ, ಪ್ರತಿಸೃಷ್ಟಿ, ಇಷ್ಟು ವಿಶಾಲವಾದ ಪ್ರಸಾರವುಳ್ಳದುದು ಮನಸ್ಸು. ಮನಸ್ಸಿನ ಗಮನಕ್ಕೆ ತಡೆಯೇ ಇಲ್ಲ. ಆದರೆ ಹೀಗೆ ಇರುವ ಅಸಂಖ್ಯಾತ ಮನಸ್ಸುಗಳು ಯಾವುದರ ಒಂದು ಅಂಶದಲ್ಲಿ ಅಡಗಿವೆಯೋ, ಅದರ ಮಹಾನ್ ವೇಗವನ್ನು ಯಾವ ಶಬ್ದದಿಂದ ತಾನೆ ವರ್ಣನೆ ಮಾಡಲಾದೀತು?

(೫೭) ಇಲ್ಲಿಯ 'ದೇವ' ಶಬ್ದದಿಂದ ಶರೀರದ ಪ್ರಕಾಶದ್ವಾರಗಳು ಎಂದರೆ ಜ್ಞಾನೇಂದ್ರಿಯಗಳೆಂದು ತಿಳಿಯತಕ್ಕದ್ದು. ವಸ್ತುತಃ ದೇವ ಎಂದರೆ ಬ್ರಹ್ಮಾಂಡದ ದಿವ್ಯಶಕ್ತಿಯೆಂದು ಅರ್ಥ. ಬ್ರಹ್ಮಾಂಡದ

ಪ್ರತಿಬಿಂಬವೇ ಪಿಂಡವಾದುದರಿಂದ ಈ ಶಕ್ತಿ ಇಂದ್ರಿಯಗಳ ಮೂಲಕ ಪಿಂಡದಲ್ಲಿ ವ್ಯಕ್ತವಾಗುತ್ತದೆ. ಇಂದ್ರಿಯ ಶಬ್ದದ ಅರ್ಥವೇ "ಇಂದ್ರಶಕ್ತಿ" ಎಂಬುದಾಗಿದೆ. ಇಂದ್ರನೆಂದರೆ "ಇದಂ ದ್ರಷ್ಟಾ" (ಐ. ೧-೩-೧೪.) ಬ್ರಹ್ಮಾಂಡದಲ್ಲಿ ಪರಮಾತ್ಮ, ಪಿಂಡದಲ್ಲಿ ಅಂತರಾತ್ಮ. ಅದರ ದರ್ಶನ ಶಕ್ತಿಯೇ ಇಂದ್ರಿಯಗಳು.

(೫೮) "ಪೂರ್ವಂ ಅರ್ಷತ್ ಇತಿ ಪುರುಷಃ" ಎಂಬ ಪುರುಷ ಶಬ್ದದ ನಿರುಕ್ತಿಯನ್ನು ಇಲ್ಲಿ ಸೂಚಿಸಿದೆ. [ಪುರುಷ ಶಬ್ದದ ಬೇರೆ ಬೇರೆ ನಿರುಕ್ತಿಗಳಿಗಾಗಿ ಟಿ. ೧೬೬ನ್ನು, ಅಂತೆಯೇ 'ಅರ್ಷತ್' ಶಬ್ದದ ಅರ್ಥಕ್ಕಾಗಿ ಟಿ. ೧೫೮ ನ್ನು ನೋಡಿ.]

(೫೯) "ತದ್ ಧಾವತೋ ಅನ್ಯಾನ್ ಅತ್ಯೇತಿ ತಿಷ್ಠತ್" ಓಡುವುದೆಲ್ಲವೂ ಆಕಾಶದಲ್ಲಿಯೇ ಓಡುತ್ತದೆ. ಆದರೆ ಆಕಾಶ ಎಲ್ಲಿಗೆ ಓಡಿ ಹೋದೀತು? ಅದಕ್ಕೆ 'ತಿಷ್ಠತ್'—ನಿಂತಿರುವ ಸ್ಥಿತಿಯೇ ಸಿದ್ಧ. ಆದರೆ ಇದು ಆಕಾಶಕ್ಕೆ ಅಂತರ್ಯಾಮಿ. "ಆಕಾಶೇ ತಿಷ್ಠನ್ ಆಕಾಶಂ ಅಂತರೋ ಯಮಯತಿ" (ಬೃ. ೩-೭-೧೨) ಎಂದಮೇಲೆ ಇದನ್ನು "ತಿಷ್ಠನ್ ಮೂರ್ತಿ" ಯೆಂದೇ ಎನ್ನಬೇಕು. ಆದಕ್ಕೇ ಭಕ್ತರು "ಯುಗೇ ಅಠ್ಠಾವೀಸ್ ವಿಟೇವರೀ ಉಭಾ" ಎಂದು ವರ್ಣಿಸುತ್ತಾರೆ.* ಅದು ನಿಂತಿದ್ದರೂ ಅದರಲ್ಲಿ ಅಪಾರ ಪ್ರೇರಣೆ ತುಂಬಿರುತ್ತದೆ. ಗೀತೆ ಇದನ್ನೆ "ಅಕರ್ಮದಲ್ಲಿ ಕರ್ಮ" ಎನ್ನುತ್ತದೆ.

(೬೦) ಅಪಃ. 'ಅಪ್' ಶಬ್ದದ ಬಹುವಚನಾರ್ಥ—ಜಲಪ್ರವಾಹ. 'ಅಪಸ್' ನ ಏಕವಚನಾರ್ಥ—ಕರ್ಮ. (ಲ್ಯಾಟಿನ್‌ನಲ್ಲಿ ಓಪಸ್.)

ಇಲ್ಲಿ ಯಾವ ಅರ್ಥವನ್ನು ತೆಗೆದುಕೊಳ್ಳುವುದು? ವಸ್ತುತಃ ಈ ಎರಡೂ ಶಬ್ದಗಳು ಅಪ್ ಎಂಬ ಗತ್ಯರ್ಥಕ ಪ್ರಾಚೀನ ಧಾತುವಿನಿಂದ ಬಂದ ರೂಪಗಳು. ಹಾಗೆಂದೇ ಈ ಸ್ಥಳದಲ್ಲಿ ವೇದದ ಸ್ವರ

---

*"೨೮ ಯುಗಗಳಲ್ಲೂ ಇಟ್ಟಿಗೆಯಮೇಲೆ ನಿಂತಿದಾನೆ" ಎಂದು ಭಕ್ತರು ಪಾಂಡುರಂಗನನ್ನು ವರ್ಣಿಸುತ್ತಾರೆ.

ಗಳನ್ನು ಅನುಸರಿಸಿ 'ಅಪಃ' ಇದನ್ನು ಬಹುವಚನವೆಂದು ತಿಳಿದು ಎರಡೂ ಕಲ್ಪನೆಗಳನ್ನು ಒಂದಾಗಿ ಕೂಡಿಸಿ ಅದರ ಅರ್ಥವನ್ನು 'ಕರ್ಮ-ಪ್ರವಾಹ'ವೆಂದು ತೆಗೆದುಕೊಳ್ಳಬೇಕು. "ಅಪೋ ದಧಾತಿ" ಎಂದರೆ "ಕರ್ಮಪ್ರವಾಹವನ್ನು ನಿರ್ಮಿಸುತ್ತದೆ" ಎಂದರೆ "ಚಲನ ವಲನ ಮಾಡುತ್ತದೆ" ಎಂದಾಗುತ್ತದೆ.

(೬೧) "ಮಾತರಿಶ್ವಾ" ಸರ್ವತ್ರ ಗತಿ-ಸಂಚಾರ ಮಾಡುವಂಥ ಪ್ರಾಣತತ್ವ ಪ್ರಕೃತಿಯಲ್ಲಿ ಅಂತರ್ಗತವಾಗಿದ್ದು ಸಕಲ ಪ್ರಾಣಿಗಳ, ಸೂರ್ಯ ಚಂದ್ರಾದಿಗಳ, ಗಮನಕ್ಕೆ ಕಾರಣವೆಂದು ಪರಿಗಣಿಸಲ್ಪಟ್ಟಿದೆ. ಇದೂ ಕೂಡ 'ತಸ್ಮಿನ್‌ಸತಿ' ಎಂದರೆ ಆತ್ಮದ ಸತ್ತೆಯ ಆಧಾರದಿಂದಲೇ ಕೆಲಸ ಮಾಡುವಂಥದು. ಆತ್ಮದ ಆಧಾರ ತಪ್ಪಿತೋ ಉರುಳಿ ಬೀಳುತ್ತದೆ.

(೬೨) ಪ್ರಕೃತಿಯನ್ನು ಇಲ್ಲಿ 'ಮಾತಾ' ಎಂದಿದೆ. ಅರ್ಥಾತ್ ಪುರುಷನನ್ನು 'ಪಿತಾ' ಎನ್ನಬೇಕಾಗುತ್ತದೆ (ಗೀತಾ. ೧೪-೪). ಈ ಉಪಮೆ ಮುಂದೆ ಕಲ್ಪನಾಕುಶಲ ಕವಿಗಳ ಕೈಯಲ್ಲಿ ಬಹಳ ವಿಸ್ತೃತವಾಗಿ, ಹೆಂಗಸಿನ ಸ್ಥಿತಿಗೆ ಪ್ರಕೃತಿ ತತ್ವದ ಅಧಿಕಾಂಶ ಬೇಕೆಂದೂ ಪುರುಷ ತತ್ವದ ಅಧಿಕಾಂಶ ಮನುಷ್ಯನ ಸ್ಥಿತಿಗೆ ಕಾರಣವೆಂದೂ ತಿಳಿಯುವ ಸ್ಥಿತಿಯವರೆಗೂ ಮುಟ್ಟಿದೆ. ರೂಪಕಗಳಿಂದ ಹೇಗೆ ಅನರ್ಥ ಉಂಟಾಗುತ್ತದೆ ಎಂಬುದಕ್ಕೆ ಇದೂ ಒಂದು ಉದಾಹರಣೆ.

(೬೩) ಈ ಮಂತ್ರದಲ್ಲಿನ ನಾಲ್ಕು ಚರಣಗಳಲ್ಲಿ ಅನುಕ್ರಮವಾಗಿ ಮನಸ್ಸು, ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪ್ರಾಣ ಇವುಗಳ ತುಲನೆಮಾಡಿ ಆತ್ಮದ ಶಕ್ತಿಯನ್ನು ತೋರಿಸಿದೆ.

(೬೪) ನೈಜವಾಗಿ ಇಂದ್ರಿಯಗಳನ್ನು ಆತ್ಮದೊಂದಿಗೆ ತುಲನೆ ಮಾಡುವುದಕ್ಕೆ ಸಾಧ್ಯವಾಗದು—ಎಂಬುದೇ ಇಲ್ಲಿಯ ತುಲನೆಯ ತಾತ್ಪರ್ಯ. ಇದರ ಸವಿಸ್ತರ ವಿವೇಚನೆಯನ್ನು ಕೇನೋಪನಿಷತ್ತಿನಲ್ಲಿ ಮಾಡಿದೆ.

(೬೫) ಈ ಜಗತ್ತಿನಲ್ಲಿ ಸರ್ವ ಪ್ರಾಣಿಗಳ ಸರ್ವ ಚಲನ ವಲನವೂ ಆತ್ಮದ ಅಧಿಷ್ಠಾನದ ಮೇಲೆಯೇ ಜರುಗುತ್ತದೆ. ಆತ್ಮಸತ್ತೆಯ ವಿನಾ

ಬೇರೆ ಸತ್ತೆಯಿಲ್ಲವೆಂದು ತಿಳಿದು, ಮೊದಲಿನ ಮಂತ್ರದಲ್ಲಿನ ತಿಳಿವಿನ ಹಾದಿಯಲ್ಲಿ ಮನುಷ್ಯನು (ಅಹಂತಾ ಎಂದರೆ) ತನ್ನ ಅಹಂಭಾವವನ್ನೂ (ಮಮತಾ) ಮಮತೆಯನ್ನೂ ನಿರಾಸ ಮಾಡಬೇಕು. ಎಲ್ಲ ಕಡೆಯಲ್ಲಿಯೂ ಭಗವಂತನ ಅಧಿಷ್ಠಾನವನ್ನು ಕಾಣಬೇಕು. ರಾಮದಾಸರ ವಾಕ್ಯ 'ಭಗವಂತಾಚಾ ಅಧಿಷ್ಠಾನ್ ಪಾಹಿಜೇ'—ಭಗವಂತನ ಅಧಿಷ್ಠಾನ ಬೇಕು ಎಂಬುದು ಪ್ರಸಿದ್ಧವಾಗಿಯೆ ಇದೆ.

೫

ಮಂತ್ರ :—ತದೇಜತಿ ತನ್ನೈಜತಿ
ತದ್ದೂರೇ ತದ್ವಂತಿಕೇ ।
ತದಂತರಸ್ಯ ಸರ್ವಸ್ಯ
ತದು ಸರ್ವಸ್ಯಾಸ್ಯ ಬಾಹ್ಯತಃ ॥ ೫ ॥

**ಪದಪಾರ :**— ತತ್, ಏಜತಿ, ತತ್, ನ, ಏಜತಿ, ತತ್, ದೂರೇ, ತತ್, ಉ, ಅಂತಿಕೇ । ತತ್, ಅಂತರ್, ಅಸ್ಯ, ಸರ್ವಸ್ಯ, ತತ್, ಉ, ಸರ್ವಸ್ಯ, ಅಸ್ಯ, ಬಾಹ್ಯತಃ ॥

**ಅರ್ಥ :**—ಅದು ಗಮನವುಳ್ಳದುದು ; ಗಮನರಹಿತವಾದುದು. ಅದು ದೂರವಾದುದು, ಹಾಗೆಯೇ ಸಮೀಪವಾದುದು. ಅದು ಈ ಎಲ್ಲದರ ಅಂತರ್ಗತ; ಎಲ್ಲದರ ಬಾಹ್ಯವಾದುದು

## ಟಿಪ್ಪಣಿ

(೬೬) ಈ ಮಂತ್ರದಲ್ಲಿ ಆತ್ಮದ ವ್ಯಾಪ್ತಿಯನ್ನು ತೋರಿಸಿದೆ. ಮೊದಲ ಚರಣದ "ಅದು ಗಮನವುಳ್ಳದುದು, ಅದು ಗಮನವಿಲ್ಲದುದು" ಎಂಬುದು ಅದರ ಶಕ್ತಿಯನ್ನು ತೋರಿಸುವಂತೆ ಇದ್ದರೂ ಅದರ ಅರ್ಥ —ಅದು ಸ್ಥಿರ, ಚರ ಎಲ್ಲವೂ ಎಂಬ ವ್ಯಾಪಕಾರ್ಥವುಳ್ಳದುದು. ಇದರ ಸಮಾನಾರ್ಥಕವಾದ ಕೆಳಗಿನ ಗೀತೆಯ ಶ್ಲೋಕದಿಂದ ಇದು ಗಮನಕ್ಕೆ ಬರುತ್ತದೆ :

ಬಹಿರಂತಶ್ಚ ಭೂತಾನಾಂ ಅಚರಂ ಚರಮೇವ ಚ ।
ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂಚಾಂತಿಕೇ ಚ ತತ್ ॥
ಗೀತಾ. ೧೩-೧೫.

(೬೭) ದೂರ, ಹತ್ತಿರ ಇವೆರಡೂ ಪದಗಳನ್ನು ಕಾಲ, ಅವಕಾಶ (ದೇಶ) ಇವೆರಡರೊಡನೆ ಸೇರಿಸಿ ಅರ್ಥಮಾಡಿಕೊಳ್ಳಬೇಕು. ಎಲ್ಲ ಭಾಷೆಗಳಲ್ಲೂ ಇವೆರಡು ಶಬ್ದಗಳು ಕಾಲ, ಅವಕಾಶ ಇವೆರಡರ ಸಂಗಡ ಅನ್ವಯಿಸುವುದು ಕಂಡುಬರುತ್ತದೆ. ಇವೆರಡೂ ಅಪರಿಮೇಯಗಳು. ಆದರೂ ಆತ್ಮದ ವ್ಯಾಪ್ತಿಯಲ್ಲಿ ಸೇರಿಹೋಗುವಂಥವು.

(೬೮) ಒಳಗಡೆ ನೋಡುವವನು, ಹೊರಗೆ ಕಾಣಿಸುವ ಜಗತ್ತು, ಎರಡು ರೂಪದಿಂದಲೂ ಪರಮಾತ್ಮನೇ ಲೀಲೆಯಾಡುತ್ತಿದಾನೆ.

ಅತ್ ಹರೀ ಬಾಹೇರ್ ಹರೀ ।
ಹರೀನೇ ಘುರೀ ಕೋಡಿಲೇಂ ॥

ಒಳಗೆ ಹರಿ, ಹೊರಗೆ ಹರಿ, ಹರಿಯೊಳಗೇ ಎಲ್ಲವೂ.

(೬೯) ಒಳಗೆ–ಹೊರಗೆ, ಹತ್ತಿರ–ದೂರ, ಚರ–ಅಚರ ರೂಪಗಳಿಂದ ಪರಮಾತ್ಮನೇ ತುಂಬಿರುವಲ್ಲಿ ಇದು ನನ್ನದು–ಇದು ಪರರದು, ಇದು ಅಂತರಂಗ–ಇದು ಬಹಿರಂಗ ಮುಂತಾದ ಭೇದಗಳಿಗೆ ಎಡೆಯೆಲ್ಲಿ? ಇದು ಮುಂದಿನ ಮಂತ್ರದಲ್ಲಿ ಸ್ಪಷ್ಟವಾಗುತ್ತದೆ.

(೭೦) ಮಂತ್ರ ೪–೫ ಸೇರಿ ಈಶ್ವರನ (೧) ಏಕತೆ, (೨) ನಿಷ್ಕಂಪತೆ, (೩) ವೇಗವತ್ತೆ, (೪) ಸರ್ವಾಧಾರತೆ, (೫) ಚರಾಚರಮಯತೆ, (೬) ದಿಕ್ಕಾಲವ್ಯಾಪಿತೆ, (೭) ದ್ರಷ್ಟೃ–ದೃಶ್ಯ ಸ್ವರೂಪತೆ ಇದನ್ನು ಧ್ಯಾನಿಸಬೇಕು, ಭಜಿಸಬೇಕು, ಅನುಭವಿಸಬೇಕು.

೬

ಮಂತ್ರ :—ಯಸ್ತು ಸರ್ವಾಣಿ ಭೂತಾನಿ
ಆತ್ಮನ್ಯೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ
ತತೋನ ವಿಜುಗುಪ್ಸತೇ ॥ ೬ ॥

ಪದಪಾಠ :- ಯಃ, ತು, ಸರ್ವಾಣಿ, ಭೂತಾನಿ, ಆತ್ಮನಿ, ಏವ, ಅನುಪಶ್ಯತಿ ಸರ್ವ, ಭೂತೇಷು, ಚ, ಆತ್ಮಾನಂ, ತತಃ, ನ, ವಿಜುಗುಪ್ಸತೇ ॥

**ಅರ್ಥ :**—ಯಾವನು ನಿರಂತರವಾಗಿ ಆತ್ಮನಲ್ಲಿ ಎಲ್ಲವನ್ನೂ, ಎಲ್ಲ ಭೂತಗಳಲ್ಲೂ ಆತ್ಮನನ್ನೂ ಕಾಣುತ್ತಾನೋ ಅಂಥವನು ಪುನಃ (ಯಾರನ್ನೇ ಆಗಲಿ, ಯಾವುದಕ್ಕೇ ಆಗಲಿ) ಜುಗುಪ್ಸೆ ಪಡುವುದಿಲ್ಲ.

## ಟಿಪ್ಪಣಿ

(೭೧) ಇದರ ಸಮಾನಾರ್ಥಕ :

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥**

**ಗೀತಾ. ೬-೨೯.**

(೭೨) ವಿಚಾರ–ದೃಷ್ಟ್ಯಾ "ಆತ್ಮನಲ್ಲಿ ಸರ್ವಭೂತಗಳು" ಸಂಶ್ಲೇಷಣ, "ಸರ್ವಭೂತಗಳಲ್ಲಿ ಆತ್ಮ" ವಿಶ್ಲೇಷಣ ಎನಿಸುತ್ತದೆ. (ಗೀತಾ. ೧೩-೩೦)

(೭೩) ಉಪಾಸನೆಯ ದೃಷ್ಟಿಯಲ್ಲಿ, "ಆತ್ಮನಲ್ಲಿ ಸರ್ವಭೂತಗಳ" ವಿಸರ್ಜನೆ, "ಸರ್ವಭೂತಗಳಲ್ಲಿ ಆತ್ಮದ" ಆವಾಹನೆ ಆಗುತ್ತದೆ. ಮೊದಲು ಆವಾಹನೆ ಮಾಡಿ, ಅನಂತರ ವಿಸರ್ಜನೆ ಮಾಡುವುದು ಉಪಾಸನೆಯ ಪದ್ಧತಿ. ಸೃಷ್ಟಿ ಶಾಸ್ತ್ರದ ಪರಿಭಾಷೆಯಲ್ಲಿ ಆವಾಹನೆಯೆಂದರೆ ಉತ್ಪತ್ತಿ, ವಿಸರ್ಜನೆಯೇ ಪ್ರಳಯ.

(೭೪) ಆಚಾರ ದೃಷ್ಟಿಯಲ್ಲಿ "ಆತ್ಮನಲ್ಲಿ ಸರ್ವಭೂತಗಳು" ಎಂದರೆ ವಿಶುದ್ಧ "ಆತ್ಮಾರ್ಥ" ವಾಗುತ್ತದೆ. "ಸರ್ವಭೂತಗಳಲ್ಲಿ ಆತ್ಮ" ಎಂದರೆ ವ್ಯಾಪಕವಾದ (ಎಲ್ಲಾ ಕಡೆಗೂ ಪಸರಿಸಿರುವ) "ಪರಾರ್ಥ" ವಾಗುತ್ತದೆ. ಎರಡೂ ಕಡೆಯಿಂದ ಹೀನ, ಸಂಕುಚಿತ ಸ್ವಾರ್ಥ ಕತ್ತರಿಸಿ ಬೀಳುತ್ತದೆ. ಅದರಿಂದ ಆತ್ಮೌಪಮ್ಯದ ಜನ್ಮವುಂಟಾಗುತ್ತದೆ. (ಗೀತಾ. ೬-೩೨).

(೭೫) "ಸರ್ವಾಣಿ ಭೂತಾನಿ ಆತ್ಮನ್ಯೇವ". ಈ 'ಏವ'ಕಾರದ ಕಾರ್ಯವೇನು? ಅದರಿಂದ ಆಧ್ಯಾತ್ಮಿಕ ದೃಷ್ಟಿಯಲ್ಲಿ ವಿಶ್ಲೇಷಣೆಗಿಂತ ಸಂಶ್ಲೇಷಣದ, ಆವಾಹನೆಗಿಂತ ವಿಸರ್ಜನೆಯ, ಪರಾರ್ಥಕ್ಕಿಂತ ಆತ್ಮಾರ್ಥದ ಮಹತ್ವವನ್ನು ಸೂಚಿಸುತ್ತದೆ. ಇವುಗಳಲ್ಲಿ ಮೊದಲಿನ ಮೂರೂ ಎರಡನೆಯ ಮೂರರಲ್ಲಿ ಪರ್ಯವಸಾನ ಹೊಂದಬೇಕು.

(೭೬) 'ಆತ್ಮನ್' ಶಬ್ದದ ವ್ಯುತ್ಪತ್ತಿ ನಾಲ್ಕು ಪ್ರಕಾರದಿಂದ ಮಾಡಲ್ಪಟ್ಟಿದೆ. ಅದರ ಏಕತ್ರ ಸಂಗ್ರಹ ಹೀಗಿದೆ:—

ಯದಾಪ್ನೋತಿ, ಯದಾದತ್ತೇ, ಯಚ್ಚಾತ್ತಿ, ವಿಷಯಾನಿಹ ।
ಯಚ್ಚಾಸ್ಯ ಸಂತತೋ ಭಾವಃ ತಸ್ಮಾದಾತ್ಮೇತಿ ಕೀರ್ತ್ಯತೇ ॥

'ಆಪ್' ವ್ಯಾಪ್ತೌ, 'ಆ+ದಾ' ಆದಾನೇ, 'ಅದ್' ಭಕ್ಷಣೇ, 'ಅತ್' ಸಾತತ್ಯಗಮನೇ—ಈ ರೀತಿಯಾಗಿ ನಾಲ್ಕು ಪ್ರಕಾರದ ವ್ಯುತ್ಪತ್ತಿಯಿದೆ. ನನಗೆ ಇದೆಲ್ಲವೂ ಕಾಲ್ಪನಿಕವೆನಿಸುತ್ತದೆ. ಇವುಗಳಲ್ಲಿ ಕಡೆಯದು ಸ್ವಲ್ಪ ಮಟ್ಟಿಗೆ ವಸ್ತುಸ್ಥಿತಿಗೆ ಸಮೀಪದ್ದೆನ್ನಲು ಸಾಧ್ಯ. ವಸ್ತುತಃ ನನ್ನ ಮತದಂತೆ, 'ಆತ್ಮ' ಶಬ್ದ 'ಆತ್' ಧಾತುವಿನ ರೂಪ. 'ಆತ್' ಎಂಬ ಪೂರ್ವ ವೈದಿಕ ಧಾತು ಸಂಸ್ಕೃತದಲ್ಲಿ ಲುಪ್ತವಾಗಿ, ಜ್ಞಾನೇಶ್ವರಿಯ ಮರಾಠಿಯಲ್ಲಿ ಯಥಾವತ್ತಾಗಿ, ತಮಿಳು ಮುಂತಾದ ದ್ರಾವಿಡ ಭಾಷೆಗಳಲ್ಲಿ ಅಪಭ್ರಂಶವಾಗಿ, ಪ್ರಕಟವಾಗಿದೆ. 'ಆತ್' ಧಾತುವಿನ ಭೂತ-ಕೃದಂತ ರೂಪ ಜ್ಞಾನೇಶ್ವರಿಯಲ್ಲಿ 'ಆತಲಾ' ಎಂದಿದೆ. 'ಆತ್' ಎಂಬುದರ ಅರ್ಥ ಮೂಲತಃ-'ಅಸ್' ಮತ್ತು 'ಭೂ' ಇವೆರಡರ ಮಧ್ಯದ್ದಾಗಿದೆ. ಈ ಅರ್ಥಭೇದ ಮುಂದೆ ಲುಪ್ತವಾಗಿದ್ದರೂ, ವಿಚಾರ ದೃಷ್ಟಿಗೆ ಅದು ಮಹತ್ವವುಳ್ಳದುದೇ ಸರಿ. 'ಅಸ್' ಎಂದರೆ ಕೇವಲ 'ಇರುವಿಕೆ'; ನಿರ್ಗುಣ. "ಭೂ" ಎಂದರೆ ವಿವಿಧ ಭಾವಗಳಿಂದ ಯುಕ್ತವಾಗಿ 'ಆಗು'ವುದು; ಸಗುಣ. 'ಆತ್' ಎಂದರೆ "'ಆಗ'ಲು ಸಾಧ್ಯವಿರುವ 'ಇರು'ವಿಕೆ"; ಮಧ್ಯಸ್ಥಿತಿ, ಸಗುಣ—ಗರ್ಭ ನಿರ್ಗುಣ. 'ಆತ್ಮನ್' ಶಬ್ದದ ಸಹವರ್ತಿಯಾದ ಪರಮಾತ್ಮವಾಚಕ — 'ಭೂಮನ್' ಶಬ್ದ ಉಪನಿಷತ್ತುಗಳಲ್ಲಿ ಬರುತ್ತದೆ. ಸ್ಥೂಲವಾಗಿ ಎರಡರ ಅರ್ಥವೂ ಒಂದೇ. ಸೂಕ್ಷ್ಮವಾಗಿ ನೋಡಿದರೆ ಅವುಗಳಲ್ಲಿಯೆ 'ಭೂಮನ್' ಸಗುಣವಾಚಕ. ಭೂಮನ್ ಶಬ್ದ 'ಭೂ' ಧಾತುವಿನಿಂದ ನಿಷ್ಪನ್ನವಾಗಿದೆ. ಇದನ್ನು ಗಮನಕ್ಕೆ ತಂದುಕೊಂಡರೆ ಈ ಸೂಕ್ಷ್ಮಭೇದ ಸ್ಪಷ್ಟವಾಗುತ್ತದೆ. ಪಾಣಿನಿ 'ಭೂಮನ್' ಶಬ್ದವನ್ನು 'ಬಹು+ಇಮನ್' ಈ ರೀತಿಯಾಗಿ ವ್ಯಾಕರಿಸಿದಾರೆ. ಪೂರ್ವದ 'ಆತ್' ಎಂಬ ವೈದಿಕ ಧಾತುವಿನ ಪರಿಚಯು ಪಾಣಿನಿಗೆ ಇಲ್ಲದುದೇ ಇದಕ್ಕೆ ಕಾರಣ. ತಿಳಿದಿದ್ದಲ್ಲಿ

ಆತ್ + ಮನ್ ಅಂತೆಯೇ ( ಭೂ + 'ಮನ್ ಎಂಬುದನ್ನು ಸೂಚಿತವಾಗುತ್ತಿತ್ತು. ಆದರ ಪರೀಕ್ಷೆಯುವಿಲ್ಲದೆ ಅವರು 'ಭೂಮನ್' ಶಬ್ದವನ್ನು 'ಆಣಿಮನ್', 'ಗರಿಮನ್' ಹಾದಿ ದಲ್ಲಿ ಕೂಡಿಸುವ ವ್ಯವಸ್ಥೆ ಮಾಡಬೇಕಾಯಿತು. ಉಪನಿಷತ್ತುಗಳಲ್ಲಿ 'ಭೂಮನ್' ಶಬ್ದ ಎಲ್ಲೆಲ್ಲಿ ಬಂದಿದೆಯೋ ಅಲ್ಲಿ ಅದು 'ಅಲ್ಪ'ಕ್ಕೆ ವಿರೋಧಿಯಾಗಿಯೇ ನಿರೂಪಿತವಾಗಿರುವ ಕಾರಣದಿಂದ ಒಂದು ವೇಳೆ ಪಾಣಿನಿಗೆ ಹಾಗೆ ಮಾಡುವ ಅವಶ್ಯಕತೆಯುಂಟಾಗಿರಬಹುದು. ಆದರೆ 'ಭೂ' ಧಾತುವಿನಿಂದ ವ್ಯುತ್ಪನ್ನವಾದ ಭೂಮಾನ್ ವಿಶ್ವರೂಪದ ದ್ಯೋತಕವಾಗುತ್ತದೆ. ವಿಶ್ವರೂಪದಲ್ಲಿ ಬಹುತ್ವ ಬಂದೇ ಬರುತ್ತದೆ. ಕಿಂಬಹುನಾ, ಬಹು ಶಬ್ದ ಮೂಲದಲ್ಲಿ 'ಭೂ' ಧಾತುವಿನಿಂದ ಬಂದುದೇ ಎಂಬುದನ್ನು ಗಮನಕ್ಕೆ ತಂದುಕೊಂಡರೆ ಯಾವ ಅಡಚಣೆಯೂ ಬಾರದು. ಆದರೂ, ಬ್ರಹ್ಮನ್–ನಿರ್ಗುಣ, ಆತ್ಮನ್–ಸಗುಣ ನಿರ್ಗುಣ, ಭೂಮನ್–ಸಗುಣ ಎಂಬುದಾಗಿ ವಿಶ್ಲೇಷಣೆಗಾಗಿ ಮಾಡಿದರೂ, ಅಂತ್ಯದಲ್ಲಿ ಅದೆಲ್ಲವನ್ನೂ ಮರೆತು 'ಈಶಾವಾಸ್ಯಮಿದಂ ಸರ್ವಂ' ಎಂಬಷ್ಟನ್ನೇ ಮತ್ತೆ ಮತ್ತೆ ಪಾಠಮಾಡಬೇಕಾಗಿದೆ. ಅಲ್ಲದೆ ಇದೇ ಈ ಮಂತ್ರದ, ಮುಂದಿನ ಮಂತ್ರದ, ಅಷ್ಟೇ ಅಲ್ಲ–ಈಶಾವಾಸ್ಯ ಉಪನಿಷತ್ತಿನ ಒಟ್ಟಿನ, ಸಾರವೇ ಆಗಿದೆ.

(೭೭) "ನ ವಿಜುಗುಪ್ಸತೇ" ಜುಗುಪ್ಸೆಹೊಂದನು. ಜುಗುಪ್ಸೆಯಲ್ಲಿ ನಿಂದೆ, ತಿರಸ್ಕಾರ, ಕಠೋರ ವೃತ್ತಿಗಳೇ ಮುಂತಾದ ಸ್ಥೂಲ ವೃತ್ತಿಗಳಲ್ಲದೆ, ಸೂಕ್ಷ್ಮತಮಗಳಾದ ದೂರೀಭಾವ ಅಥವಾ ಮುಚ್ಚುಮರೆ ಸಮಾವಿಷ್ಟವಾಗಿದೆ ಎಂದು ತಿಳಿಯಬೇಕು. 'ಜುಗುಪ್ಸತೇ' ಎಂಬುದು 'ಗುಪ್' ಧಾತುವಿನ ಇಚ್ಛಾರ್ಥಕ ರೂಪ. ಆದರ ಅಕ್ಷರಶಃ ಅರ್ಥ, ತನ್ನನ್ನು ಬೇರೆಯಾಗಿಡುವ, ಗೋಪನ ಮಾಡುವಂಥ ವೃತ್ತಿ ಎಂದಾಗುತ್ತದೆ.

(೭೮) "ತತೋ ನ ವಿಜುಗುಪ್ಸತೇ" ಎಂಬಲ್ಲಿ 'ತತೋ ನ ವಿಚಿಕಿತ್ಸತಿ' ಎಂಬ ಪಾಠಾಂತರವಿದೆ. ಆದರ ಅರ್ಥ–ಅವನಿಗೆ ಮುಂದೆ ಯಾವ ತೆರದ ಸಂಶಯವೂ ಉಳಿಯುವುದಿಲ್ಲ.

(೭೯) "ತತೋ ನ ವಿಜುಗುಪ್ಸತೇ". ಸರ್ವಭೂತಗಳಲ್ಲಿ ನಾನು, ನನ್ನಲ್ಲಿ ಸರ್ವಭೂತಗಳು ಎಂಬ ವಿಶಾಲತಮ ಮಾತೃಹೃದಯ ದೊರೆತ ಮೇಲೆ ಜುಗುಪ್ಸೆ ಎಲ್ಲಿ ಬಂದೀತು? ಹಾಗೆಂದೇ ಭಕ್ತನ ಲಕ್ಷಣ—

'ಯಸ್ಮಾನ್ನೋದ್ವಿಜತೇ ಲೋಕೋ
ಲೋಕಾನ್ನೋ ದ್ವಿಜತೇ ಚ ಯಃ' ॥ ಗೀತಾ. ೧೨-೧೫.

೭

ಮಂತ್ರ :—ಯಸ್ಮಿನ್ ಸರ್ವಾಣಿ ಭೂತಾನಿ
ಆತ್ಮೈವಾಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕಃ
ಏಕತ್ವಮನುಪಶ್ಯತಃ ॥ ೭ ॥

**ಪದಪಾಠ** :—ಯಸ್ಮಿನ್, ಸರ್ವಾಣಿ, ಭೂತಾನಿ, ಆತ್ಮಾ, ಏವ, ಅಭೂತ್, ವಿಜಾನತಃ । ತತ್ರ, ಕಃ ಮೋಹಃ, ಕಃ, ಶೋಕಃ, ಏಕತ್ವಂ, ಅನುಪಶ್ಯತಃ ॥

**ಅರ್ಥ** :— ಯಾವನ ದೃಷ್ಟಿಗೆ ಸರ್ವಭೂತಗಳಲ್ಲಿಯೂ ಆತ್ಮನೇ ಆದನೋ (ಕಂಡುಬರುತ್ತಾನೋ) ಅಂಥ ಏಕತ್ವವನ್ನು ನಿರಂತರವೂ ಕಾಣುವ ವಿಜ್ಞಾನಿಯಾದ ಮನುಷ್ಯನಿಗೆ ಮೋಹ ಎಲ್ಲಿಯದು, ಶೋಕವೆಲ್ಲಿಯದು?

(೮೦) ಹಿಂದಿನ ಮಂತ್ರದಲ್ಲಿ ಸೂಚಿಸಿದಂತೆ, ಮಾತೃಹೃದಯಕ್ಕೆ ಜುಗುಪ್ಸೆಯಿಲ್ಲದೆ ಹೋದರೂ ಮೋಹವಿರಲು ಸಾಧ್ಯವಿದೆ ಎಂಬ ಶಂಕೆಯನ್ನು ಕಲ್ಪಿಸಿ ಅದರ ನಿವಾರಣೆಗಾಗಿ ಈ ಮಂತ್ರವನ್ನು ಹೇಳಿದೆ.

(೮೧) ಹಿಂದಿನ ಮಂತ್ರ ಭಕ್ತಿ–ಪ್ರೇಮಪರವಾದುದು. ಅದಕ್ಕೆ ಅನುಗುಣವಾಗಿ ಓತಪ್ರೋತತೆಯ ಭಾಷೆ ಹೇಳಲ್ಪಟ್ಟಿದೆ ಈ ಮಂತ್ರ ಜ್ಞಾನಪರವಾದುದು. ಅದಕ್ಕನುಸಾರವಾಗಿ ಇಲ್ಲಿ ಕೇವಲ ಏಕತ್ವದ ಮಾತು ಇದೆ. ವಸ್ತುತಃ ಎರಡೂ ಒಂದೇ. ಎಲ್ಲಿ ಓತಪ್ರೋತತೆ ಸಂಕುಚಿತವೋ–ಉದಾ : ತಾಯಿಗೆ ತನ್ನ ನಾಲ್ಕು ಮಕ್ಕಳಮೇಲೆ ಪ್ರೀತಿ– ಅಲ್ಲಿ ಮೋಹವಿರಲು ಸಾಧ್ಯ. ಆದರೆ ವಿಶ್ವವ್ಯಾಪಿಯಾದ ಓತಪ್ರೋತತೆಯಲ್ಲಿ ಈ ದೋಷ ಬಾರದು. ಹೀಗಿರುವುದರಿಂದ ಹಿಂದಿನ ಮಂತ್ರ

ನಿರ್ಭಯದ್ದು ಈ ಮಂತ್ರವಂತೂ ಸರಿಯೆ ಸರಿ. ವ್ಯಾಪಕತವು ಓತಪ್ರೋತತಯೆ ನಿರ್ದ್ವಂದ್ವ ಏಕತ್ವ

(೬೨) "ಆತ್ಮೈವ ಸರ್ವಾಣಿ ಭೂತಾನಿ" ಎಂದರೆ ಮೊದಲನೆಯ ಮಂತ್ರದ "ಈಶಾವಾಸ್ಯಮಿದಂ ಸರ್ವಂ". ಒಂದರದು ಆತ್ಮಜ್ಞಾನದ ಭಾಷೆ, ಮತ್ತೊಂದು ಭಕ್ತಿಯ ಭಾಷೆ. ಇಷ್ಟೇ ಭೇದ.

(೬೩) "ವಿಜಾನತಃ" ಜ್ಞಾನವೆಂದರೆ ಬುದ್ಧಿಯಿಂದ ತಿಳಿಯುವುದು, ವಿಜ್ಞಾನವೆಂದರೆ ಜೀವನದಲ್ಲಿ ಅನುಭವ ಪಡೆಯುವುದು. ಜ್ಞಾನವಾದ ನಂತರ ಅದೇ ಜ್ಞಾನ ಆಚರಣೆಯ (ಕೃತಿಯ) ಮೂಲಕ ಪಕ್ವಮಾಡಲ್ಪಟ್ಟು ಆತ್ಮಸಾತ್ ಆದರೆ ವಿಜ್ಞಾನವಾಗುತ್ತದೆ.

ಜ್ಞಾತಾ + ಕರ್ತಾ = ವಿಜ್ಞಾತಾ

ಹಿಂದೆ ಟಿಪ್ಪಣಿ (೨)ರಲ್ಲಿ ಇದು ವಿವರಿಸಲ್ಪಟ್ಟಿದೆ.

(೬೪) "ಅನುಪಶ್ಯತಃ" ಹಿಂದಿನ ಮತ್ತು ಈ ಮಂತ್ರದಲ್ಲಿ ದರ್ಶನದಿಂದ ಸಂತುಷ್ಟವಾಗದೆ ಅನುದರ್ಶನದ ಅಪೇಕ್ಷೆ ಮಾಡಲ್ಪಟ್ಟಿದೆ. ಅನುದರ್ಶನ ಎಂದರೆ ಸತತ ದರ್ಶನ. ಯಾವುದೊಂದು ವಿಶೇಷ, ಪವಿತ್ರ ವೇಳೆಯಲ್ಲಿ ಮಿಂಚಿನಂತೆ ಹೊಳೆದು "ಪ್ರಾತಿಭ ದರ್ಶನ" ವಾದರೆ ಸಾಲದು. ಅದು ಕೇವಲ ಆಶ್ವಾಸನ ಮಾತ್ರ. ಸೂರ್ಯಪ್ರಕಾಶದಂತೆ ಸತತವಾಗಿ ದರ್ಶನವಾಗಬೇಕು. ಆಗಲೇ ಸಂಸಾರಕ್ಷಯವಾದೀತು.

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವತ್ ಜ್ಞಾನಂ ಪ್ರಕಾಶಯತಿ ತತ್ಪರಂ ॥**

ಗೀತಾ. ೫-೧೬.

(೬೫) ಏಕತ್ವದ ಸತತ ದರ್ಶನ ಅನೇಕತ್ವವನ್ನು ಅರಗಿಸಿಕೊಂಡೇ ಆಗುವಂಥದು. ಏಕತ್ವ ಅನೇಕತ್ವಗಳ ವಿರೋಧವೆ ಉಳಿದರೆ 'ಸಮಾಧಿ ವ್ಯುತ್ಥಾನ'ಗಳ ಅಸಮನ್ವಯ (Antithesis) ಹಿಂದೆಯೇ ಬರುತ್ತದೆ.

(೬೬) ಶೋಕ, ಮೋಹಗಳು ಅಣ್ಣತಮ್ಮಂದಿರೇ ಸರಿ. ಸಂಕುಚಿತ ಆತ್ಮೀಯತೆಯಿಂದ ಮೋಹ; ದೇಹನಾಶ ಮುಂತಾದ ಪ್ರಸಂಗಗಳಲ್ಲಿ ಅದು ಶೋಕಕ್ಕೆ ಕಾರಣವಾಗುತ್ತದೆ. ವ್ಯಾಪಕ ಆತ್ಮೀಯತೆ

ಯಲ್ಲಿ ಅದರ ಸಂಭವವಿಲ್ಲ. ಯಾಕೆಂದರೆ ವ್ಯಾಪಕ ಆತ್ಮೀಯತೆ ದೇಹವನ್ನು ಪಕ್ಕಕ್ಕೆ ತಳ್ಳಿಯೆ ಇರುತ್ತದೆ. ಅದೇ ಮುಂದಿನ ಮಂತ್ರದಲ್ಲಿ ಸ್ಫುಟವಾಗುತ್ತದೆ.

(೮೭) ಈಶಾವಾಸ್ಯ, ಗೀತೆ ಇವುಗಳಿಗೆ ನಿಕಟ ಸಂಬಂಧವಿದೆ. ಇಲ್ಲಿಯ ಶೋಕ ಮೋಹ ಶಬ್ದಗಳು ಗೀತೆಯ ಕಥೆಯನ್ನೇ ಸ್ಮರಣ ಮಾಡಿಸುತ್ತವೆ.

೮

**ಮಂತ್ರ:**—ಸಪರ್ಯಗಾಚ್ ಛುಕ್ರಮಕಾಯಮವ್ರಣಂ
ಅಸ್ನಾವಿರಂ ಶುದ್ಧಮಪಾಪವಿದ್ಧಂ ।
ಕವಿರ್ಮನೀಷೀ ಪರಿಭೂಃ ಸ್ವಯಂಭೂರ್
ಯಾಥಾತಥ್ಯತೋಽರ್ಥಾನ್ ವ್ಯದಧಾಚ್
ಛಾಶ್ವತೀಭ್ಯಃ ಸಮಾಭ್ಯಃ ॥

**ಪದಪಾಠ:**—ಸಃ, ಪರ್ಯಗಾತ್, ಶುಕ್ರಂ, ಅಕಾಯಮ್, ಅವ್ರಣಂ, ಅಸ್ನಾವಿರಂ, ಶುದ್ಧಂ, ಅಪಾಪವಿದ್ಧಂ । ಕವಿಃ ಮನೀಷೀ, ಪರಿಭೂಃ, ಸ್ವಯಂಭೂಃ, ಯಾಥಾತಥ್ಯತಃ, ಅರ್ಥಾನ್, ವ್ಯದಧಾತ್, ಶಾಶ್ವತೀಭ್ಯಃ, ಸಮಾಭ್ಯಃ ॥

**ಅರ್ಥ:**—ಆ ತೇಜಸ್ವಿಯಾದ, ದೇಹರಹಿತ, ಆದುದರಿಂದಲೇ ವ್ರಣ ಮುಂತಾದ ದೇಹದೋಷಗಳಿಂದಲೂ ಸ್ನಾಯು ಮುಂತಾದ ದೇಹ ಗುಣಗಳಿಂದಲೂ ಯಾವ ವಿಧವಾಗಿಯೂ ಲಿಪ್ತವಾಗದ, ಶುದ್ಧವಾದ, ಪಾಪ–ವೇಧೆಯಿಂದ ಮುಕ್ತವಾದ ಆತ್ಮತತ್ವವನ್ನು ನಾಲ್ಕೂ ಕಡೆಯಿಂದ ಸುತ್ತುಗಟ್ಟಿ ಕುಳಿತನು. ಆ ಕವಿ, ಎಂದರೆ ಕ್ರಾಂತದರ್ಶಿ, ವಶಿಯೂ ವ್ಯಾಪಕನೂ ಆದನು, ಸ್ವತಂತ್ರನಾದನು. ಅವನು ಶಾಶ್ವತಕಾಲ ಪರ್ಯಂತ ನಿಲ್ಲುವ ಸಕಲ ಅರ್ಥವನ್ನು ಯಥಾವತ್ ಸಾಧಿಸಿದನು.

## ಟಿಪ್ಪಣಿ

(೮೮) ಇದನ್ನು ಆತ್ಮದ ವರ್ಣನೆಯೆಂದು ತೆಗೆದುಕೊಳ್ಳದೆ ಆತ್ಮಜ್ಞಾನ ವರ್ಣನೆಯೆಂದು ತೆಗೆದುಕೊಂಡರೆ ಮಂತ್ರ ಸರಳವಾಗುತ್ತದೆ. ಸಃ–ಕರ್ತೃಪದ, ಶುಕ್ರಂ–ಕರ್ಮಪದ, ಪರ್ಯಗಾತ್–ಕ್ರಿಯಾಪದ.

ಅಲ್ಲದೆ ಮುಂದಿನ ಎರಡು ಮಂತ್ರಗಳೂ ಆತ್ಮಜ್ಞನ ವರ್ಣನೆಮಾಡಿರುವುದರಿಂದ ಅವುಗಳೊಂದಿಗೆ ಇದು ಏಕವಾಕ್ಯತೆಯನ್ನು ಹೊಂದುತ್ತದೆ.

(೮೯) ಇಂದ್ರಿಯಾದಿಗಳಮೇಲೆ ಪಾಪದ ವೇಧೆ ಉಂಟಾಗುತ್ತದೆ. ಆತ್ಮವನ್ನು ಅದು ಸೋಕದು ಈ ವಿಷಯವನ್ನು ಬೃಹದಾರಣ್ಯಕದ ಒಂದು ಆಖ್ಯಾಯಿಕೆಯಲ್ಲಿ ವಿವರಿಸಿದೆ (ಬೃ. ೧-೩. ಮಂತ್ರ ೨-೭). ಬೃಹದಾರಣ್ಯಕ ಉಪನಿಷತ್ತು ಈಶಾವಾಸ್ಯದ ಒಂದು ಭಾಷ್ಯವೇ ಆಗಿದೆ.

(೯೦) ಶುಕ್ರಂ, ಅಕಾಯಂ ಮುಂತಾದ ಪದಗಳು ಕ್ಷೇತ್ರದಿಂದ ಬೇರೆಯಾದ ಕ್ಷೇತ್ರಜ್ಞನ ಸ್ವರೂಪವನ್ನು ಮಂಡಿಸಿವೆ ಒರೆಯಿಂದ ಖಡ್ಗವನ್ನು ಹೊರಗೆಳೆದು ತೆಗೆಯುವಂತೆ, ದೇಹದಲ್ಲಿ ಅಡಗಿರುವ ಆತ್ಮತತ್ವವನ್ನು ಸೂಕ್ಷ್ಮಬುದ್ಧಿಯಿಂದಲೂ ಧೈರ್ಯದಿಂದಲೂ ಹೊರಕ್ಕೆ ತೆಗೆದಲ್ಲಿ ಅದರ ಅಮರ ತೇಜಸ್ಸು ಪ್ರಕಟವಾಗುತ್ತದೆ. (ಕಠ ೬-೧೭).

(೯೧) ಆತ್ಮಜ್ಞ ಮನುಷ್ಯನಿಗೆ ಕವಿಯೆಂಬ ಸಮರ್ಪಕ ಸಂಜ್ಞೆಯನ್ನು ಇಲ್ಲಿ ಕೊಟ್ಟಿದೆ. 'ಕವಿ' ಎಂದರೆ ಕ್ರಾಂತದರ್ಶಿಯೆಂದು ನಿರುಕ್ತ ತಿಳಿಸುತ್ತದೆ. ಕ್ರಾಂತದರ್ಶಿಯೆಂದರೆ ಪಾರದರ್ಶಿ. ದೇಹದ ಪರದೆಯನ್ನು ದೂರವಾಗಿ ಸರಿಸಿ, ದೂರದಲ್ಲಿರುವುದನ್ನು ನೋಡಲು ಶಕ್ತನಾದವನು ಇಂಥಾ ಪಾರದರ್ಶಿ ಕವಿಗಳಲ್ಲಿ ಆತ್ಮಜ್ಞಾನಿಯೇ ಶಿರೋಮಣಿ.

"ಪದವೀಃ ಕವೀನಾಂ"—ಋಗ್ವೇದ.

(೯೨) ಆತ್ಮಜ್ಞ ಪುರುಷನ ವರ್ಣನೆಯಲ್ಲಿ ಪ್ರತಿಭಾಶಾಲಿಯಾದ ಕವಿಯ ಲಕ್ಷಣಗಳನ್ನು ಆನುಷಂಗಿಕವಾಗಿಯಾದರೂ ಸಮಗ್ರವಾಗಿ ತಿಳಿಸಿದೆ. (ಜಿಜ್ಞಾಸುಗಳು 'ವಿನೋಬಾ ವಿಚಾರಲಹರಿ'ಯಲ್ಲಿ ಬರುವ 'ಕವಿಯ ಗುಣ' ಎಂಬ ಲೇಖನವನ್ನು ನೋಡಬೇಕು.)

(೯೩) ಮನಸಃ ಈಷ್ಟೇ ಇತಿ "ಮನೀಷೀ"—ಯಾರಿಗೆ ತನ್ನ ಮನದ ಮೇಲೆ ಪ್ರಭುತ್ವ ಸಾಧ್ಯವೋ, ಎಂದರೆ ಯಾರು ತನ್ನ ಮನವನ್ನು ಸರಿಯಾದ ಪ್ರಮಾಣದಲ್ಲಿ ಆವರಿಸಲೂ ಬಳಸಲೂ ಬಲ್ಲನೋ ಅಂಥವನು ಮನೀಷೀ. ಈಶಾವಾಸ್ಯ ಈಶ್ವರನ ಉಪಾಸನೆಯನ್ನು ಕಲಿಸುವಂಥ ಉಪನಿಷತ್ತು. ಈಶ್ವರನ ಉಪಾಸಕ ತನ್ನ ಕ್ಷೇತ್ರಕ್ಕಾದರೂ ಈಶ್ವರನಾಗಲೇ ಬೇಕು. ಈ

ಮಂತ್ರದಲ್ಲಿ ಸೂಚಿಸಲ್ಪಟ್ಟ ಕ್ಷೇತ್ರ ಕ್ಷೇತ್ರಜ್ಞ ವಿವೇಕಕ್ಕೂ ಇದೇ ಪರಿಣಾಮ ಅಪೇಕ್ಷಿತ.

(೯೪) ಕವಿ, ಮನೀಷೀ ಇವೆರಡೂ ಪರಸ್ಪರ ಪೂರಕ ವಿಶೇಷಣಗಳು. ದರ್ಶನ ಶಕ್ತಿ, ನಿರೋಧ ಶಕ್ತಿ ಇವೆರಡರ ಯೋಗವಿರಬೇಕು. ಇವುಗಳ ಪ್ರಕ್ರಿಯೆ ಮುಂದಿನ ಎರಡು ತ್ರಿಕೆಗಳಲ್ಲಿ ( ಮಂತ್ರ ೯-೧೪) ರಚಿತವಾಗಿದೆ. ಗೀತೆ ಇವುಗಳಿಗಾಗಿ ಬುದ್ಧಿ, ಧೃತಿಗಳನ್ನು ಸೇರಿಸಿ ಜುಗಸಾಧನೆಯನ್ನು ಕಲ್ಪಿಸಿದೆ. ಒಂದು ಚುಕ್ಕಾಣಿ, ಇನ್ನೊಂದು ಹುಟ್ಟು. ಎರಡೂ ಸೇರಿ ತರಣೋಪಾಯ (ಟಿಪ್ಪಣಿ ೧೯ನ್ನು ನೋಡಿ.)

(೯೫) ಪರಿ + ಭೂಃ ಎಂಬುದಕ್ಕೆ ‘ಸರ್ವೋಪರಿ’ ಅಥವಾ ‘ಸರ್ವಾತಿಕ್ರಮಕಾರೀ’ ಎಂಬರ್ಥಗಳು ಮಾಡಲ್ಪಟ್ಟಿವೆ. ಆದರೆ ಈ ಅರ್ಥ ಲೌಕಿಕ ಸಂಸ್ಕೃತದ್ದು. ವೈದಿಕ ಸಂಸ್ಕೃತದಂತೆ ‘ಪರಿಭೂಃ’ ಎಂದರೆ ನಾಲ್ಕು ಕಡೆಗಳಲ್ಲೂ ಸುತ್ತುಗಟ್ಟಿ ಕೂಡುವ, ವ್ಯಾಪಕ ಎಂದು ಅರ್ಥ.

(೯೬) ಪರಿಭೂ, ಸ್ವಯಂಭೂ ಇವೆರಡೂ ಪರಸ್ಪರ ಪೂರಕ ವಿಶೇಷಣಗಳು. ಬ್ರಹ್ಮಸೂತ್ರಗಳ ಭಾಷೆಯಲ್ಲಿ, ‘ಸರ್ವಾಪೇಕ್ಷಾ’. ‘ಅನಪೇಕ್ಷಾ’ ಎಂದರೆ ಸರ್ವ ಸಂಗ್ರಾಹಕ ಬುದ್ಧಿ, ಅನ್ಯ ನಿರಪೇಕ್ಷ ಸ್ವತಂತ್ರ ವೃತ್ತಿ–ಇವುಗಳ ಯೋಗವನ್ನು ಹೇಳಿದೆ. ಒಂದು ಆತ್ಮದ ವ್ಯಾಪಕತೆಯಿಂದ, ಮತ್ತೊಂದು ಸ್ವಯಂಪೂರ್ಣತೆಯಿಂದ ನಿಷ್ಪನ್ನವಾಗುತ್ತವೆ.

(೯೭) “ಯಾಥಾತಥ್ಯತಃ” ಶಬ್ದ ವಿವರಣಾತ್ಮಕವಾದುದು. ಇದನ್ನು ತೆಗೆದುಹಾಕಿದರೇನೆ ಛಂದಸ್ಸು ಸರಿಯಾಗುತ್ತದೆ. ಭಾಷಾಂತರದಲ್ಲಿನ ಯಥಾವತ್ ಶಬ್ದವನ್ನು ತೆಗೆಯತಕ್ಕದ್ದು; ಕಡೆಯ ಎರಡು ಚರಣಗಳನ್ನು ಹೀಗೆ ಓದತಕ್ಕದ್ದು.

**ಕವಿರ್ಮನೀಷೀ ಪರಿಭೂಃ ಸ್ವಯಂಭೂರ್-**
**ಅರ್ಥಾನ್ ವ್ಯದಧಾಚ್ ಛಾಶ್ವತೀಭ್ಯಃ ಸಮಾಭ್ಯಃ ॥**

(೯೮) “ಅರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ” ವ್ಯದಧಾತ್ ಎಂದರೆ ಸಾಧಿಸಿದನು, ಸಂಪಾದಿಸಿದನು, ಸಂಪಾದಿಸಿ ಮುಕ್ತ

ನಾದನು ಎಂದರ್ಥ. ಆತ್ಮಜ್ಞ ಪುರುಷನಿಗೆ ಯಾವುದೂ ಸಂಪಾದಿಸಬೇಕಾದುದು ಉಳಿಯಲಿಲ್ಲ. ಶಾಶ್ವತಕಾಲ ಪರ್ಯಂತ ಇಷ್ಟು ಸಾಕು ಎಂದು ಸಂಗ್ರಹಿಸಿಟ್ಟಿರುತ್ತಾನೆ ಎಂಬುದೇ ಅರ್ಥ. "ನಾನವಾಪ್ತಮವಾಪ್ತವ್ಯಂ". (ಗೀತಾ. ೩-೨೨).

(೯೯) ದೇಹಾತೀತನಾಗಿ ಯಾವನು ಶಾಶ್ವತ ಅರ್ಥವಾದ ಪರಮಾರ್ಥವನ್ನು ಸಾಧಿಸಿದನೋ ಅತನಲ್ಲಿ ಅರ್ಥಲೋಭವೆಲ್ಲಿರುತ್ತದೆ? ಎಂದಮೇಲೆ "ಮಾಗೃಧಃ ಕಸ್ಯಸ್ವಿದ್ಧನಮ್", ಈ ಆಜ್ಞೆ ಸಹಜವಾಗಿಯೇ ಫಲಿಸಿತು, ಉನ್ಮೂಲನವಾಯಿತು. ಅರ್ಥಾತ್, ಕೃತಾರ್ಥವಾಗಿ ಕುಂಠಿತವಾಯಿತು.

(೧೦೦) ಮಂತ್ರ ೬ ರಿಂದ ೮ರ ವರೆಗಿನ ತ್ರಿಕೆಯಲ್ಲಿ ಆತ್ಮಜ್ಞ ಪುರುಷನ ಗುಣ-ಚರಿತ್ರೆ ಈ ರೀತಿ ವಿವರಿಸಿದೆ:—

೧. ಓತ-ಪ್ರೋತ ವಿಶ್ವಪ್ರೇಮ.
೨. ಯಾರದೇ ಆಗಲಿ, ಯಾವ ರೀತಿಯದೆ ಆಗಲಿ, ಜುಗುಪ್ಸೆ ಯಿಲ್ಲ.
೩. ವಿಶ್ವಾತ್ಮೈಕತ್ವದರ್ಶನ.
೪. ಮೋಹವಿಲ್ಲ, ಶೋಕವಿಲ್ಲ.
೫. ವಿದೇಹ ಸ್ಥಿತಿ.
೬. ಪಾರದರ್ಶಿತೆ, ವಶಿತ್ವ, ವ್ಯಾಪಕತ್ವ, ಸ್ವಾತಂತ್ರ್ಯ.
೭. ಶಾಶ್ವತ ಅರ್ಥಲಾಭ.

(೧೦೧) ದೇಹವನ್ನು ಹರಿದು ಆತ್ಮವನ್ನು ಎಳೆದು ತೆಗೆಯಬೇಕಾದರೆ ಅಲಗು ಹರಿತವಾಗಿಯೂ ಸೂಕ್ಷ್ಮವಾಗಿಯೂ ಇರಬೇಕು. ಅದರ ಪ್ರಕ್ರಿಯೆಯನ್ನು ಮುಂದಿನ ೬ ಮಂತ್ರಗಳಲ್ಲಿ ತಿಳಿಸಿದೆ.

**೯**

ಮಂತ್ರ:—ಅಂಧಂತಮಃ ಪ್ರವಿಶಂತಿ
ಯೇಽವಿದ್ಯಾಮುಪಾಸತೇ ।
ತತೋ ಭೂಯ ಇವ ತೇ ತಮೋ
ಯ ಉ ವಿದ್ಯಾಯಾಗುಂ ರತಾಃ ॥ ೯ ॥

**ಪದಪಾಠ :**—ಅಂಧಂ, ತಮಃ, ಪ್ರವಿಶಂತಿ, ಯೇ, ಅವಿದ್ಯಾಂ, ಉಪಾಸತೇ ತತಃ, ಭೂಯಃ, ಇವ, ತೇ, ತಮಃ, ಯೇ, ಉ, ವಿದ್ಯಾಯಾಂ, ರತಾಃ ||

**ಅರ್ಥ :**—ಯಾರು ಅವಿದ್ಯೆಯಲ್ಲಿಯೇ ತಲ್ಲೀನರಾಗಿರುತ್ತಾರೋ ಅವರು ಗಾಢವಾದ ಅಂಧಕಾರದಲ್ಲಿ ಮುಳುಗುತ್ತಾರೆ. ಅದಕ್ಕಿಂತಲೂ ಹೆಚ್ಚೋ ಏನೋ ಎಂಬ ಅಂಧಕಾರದಲ್ಲಿ, ಯಾರು ವಿದ್ಯೆಯಲ್ಲಿಯೇ ರಮಿಸುತ್ತಾರೋ ಅವರು ಮುಳುಗುತ್ತಾರೆ.

## ಟಿಪ್ಪಣಿ

(೧೦೨) ಅವಿದ್ಯೆ-ವಿದ್ಯೆ, ಅಜ್ಞಾನ-ಜ್ಞಾನ, ಇವೆರಡು ಒಂದೇ ವಸ್ತುವಿನ ನಿವೃತ್ತ (ನೆಗೆಟಿವ್), ಪ್ರವೃತ್ತ (ಪಾಸಿಟಿವ್) ಅಂಗಗಳು. ಅದಕ್ಕನುರೂಪವಾಗಿ ಅವುಗಳ ಫಲವನ್ನೂ ಮುಂದೆ ೧೧ನೆಯ ಮಂತ್ರದಲ್ಲಿ ನಿವೃತ್ತ, ಪ್ರವೃತ್ತ ಸ್ವರೂಪದಲ್ಲಿ ತೋರಿಸಿದೆ. ಅವಿದ್ಯೆಯೆಂದರೆ ಇಷ್ಟ ಅರ್ಥದೊಂದಿಗೆ, ಅನಧಿಕೃತ ಅನಂತ ಜ್ಞಾನವನ್ನು ಸೇರಿಸದೆ ಇರುವುದು. ವಿದ್ಯೆಯೆಂದರೆ, ಇಷ್ಟಾರ್ಥದೊಂದಿಗೆ ಅಧಿಕೃತ ವಿಶಿಷ್ಟ ಜ್ಞಾನವನ್ನು ಸೇರಿಸುವುದು. ಈಶಾವಾಸ್ಯದಲ್ಲಿ ಈ ಶಬ್ದಕ್ಕೆ ಈ ಅರ್ಥ ಪಾರಿಭಾಷಿಕವಾಗಿದೆ. (ಟಿ. ೧೪೩ ನೋಡಿ.)

(೧೦೩) ಅವಿದ್ಯೆಯ ಮೂಲಕ ಅಪೇಕ್ಷಿತ ಲಾಭ- (೧) ಬುದ್ಧಿಯ ಮೇಲೆ ಭಾರವಿಲ್ಲದಿರುವಿಕೆ (೨) ಪ್ರಾಣಶಕ್ತಿಸಂಚಯ (೩) ನಮ್ರತೆ. ವಿದ್ಯೆಯಿಂದ ಅಪೇಕ್ಷಿತ ಲಾಭ-ಬೌದ್ಧಿಕವಾದ ದಿಗ್ದರ್ಶನ. ವಿದ್ಯೆ ಅವಿದ್ಯೆ ಒಂದೊಕ್ಕೊಂದರ ಸಹಾಯವಿಲ್ಲದೆ ಅಕಿಂಚಿತ್ಕಾರಿಗಳು.

(೧೦೪) ವಿದ್ಯಾಹೀನ ಅವಿದ್ಯೆ, ಅವಿದ್ಯಾಹೀನ ವಿದ್ಯೆ ಇವು ಕೇವಲ ಅಕಿಂಚಿತ್ಕಾರಿಗಳು ಮಾತ್ರವಲ್ಲದೆ, ಅನರ್ಥಕಾರಿಗಳಾಗಿಯೂ ಸಂಭವಿಸುತ್ತವೆ. ಆದುದರಿಂದಲೇ ಒಂದೊಂದರದೇ ಆಶ್ರಯ ಘೋರ ಅಂಧಕಾರವೆಂದು ಹೇಳಿದೆ.

(೧೦೫) ಆದರೆ ಇವುಗಳಲ್ಲಿ ಯಾವ ಅಂಧಕಾರ ಘೋರತರವೆಂದು ಹೇಳುವುದು ಕಠಿಣ 'ಭೂಯ ಇವ' ಇದರ ನಡುವಿನ 'ಇವ' ಶಬ್ದ ಇದನ್ನೇ ಸೂಚಿಸುತ್ತದೆ. ಹಾಗಾದರೂ ಇಲ್ಲಿ ಒಂದು ರೀತಿಯಲ್ಲಿ

ಕೇವಲ ಅವಿದ್ಯೆಯೇ ಸಾಕು, ಆದರೆ ಕೇವಲ ವಿದ್ಯೆ ಬೇಡ ಎಂದಂತೆ ಕಾಣಿಸುತ್ತದೆ. ಯಾಕೆಂದರೆ ವಿದ್ಯಾಹೀನ ಅವಿದ್ಯೆಯಿಂದ ಜ್ಞಾನಶೂನ್ಯ ಜಡತ್ವ ಉಂಟಾದರೂ, ಅವಿದ್ಯಾಹೀನ ವಿದ್ಯೆಯಿಂದ ಪ್ರಾಣಹೀನತೆ, ಕೇವಲ ಅಹಂಕಾರ ಉಂಟಾಗುತ್ತವೆ. ಈ ಪರಿಣಾಮ ಹೆಚ್ಚು ಭಯಾನಕವೆಂದು ಹೇಳಬೇಕಾಯಿತು.

(೧೦೬) ಕೇವಲ ಅವಿದ್ಯೆಯಲ್ಲಿ ಒಂದು ಪ್ರಕಾರದ ಲಯವೃತ್ತಿ ಇರುತ್ತದೆ. ಆ ಅರ್ಥವನ್ನು 'ಉಪಾಸತೇ' ಶಬ್ದ ಸೂಚನೆ ಮಾಡುತ್ತದೆ. ಇದನ್ನು ನಿದ್ರೆಯೊಂದಿಗೆ ತುಲನೆ ಮಾಡಲುಬಹುದು. ವ್ಯತಿರೇಕವಾಗಿ, ವಿದ್ಯೆಯಲ್ಲಿ ವಿವಿಧ ಆನಂದ ಭೋಗಮಾಡುವ ವೃತ್ತಿಗಳಿರುತ್ತವೆ. ಆ ಅರ್ಥದ ಸೂಚಕ ಶಬ್ದ 'ರತಾಃ'. ಇದನ್ನು ಜಾಗೃತ ಅವಸ್ಥೆಯೊಂದಿಗೆ ತುಲನೆ ಮಾಡಬಹುದು. ಉಭಯ ದೋಷ ವರ್ಜಿತವಾದ, ಉಭಯ ಗುಣಸಂಪನ್ನವಾದ ಆತ್ಮನಿಷ್ಠೆ ಅಭೀಷ್ಟವಾದುದು. ಇದೇ ನ್ಯಾಯವೇ ಮಂತ್ರ ೧೨ರಲ್ಲಿ ನಿರೋಧ ವಿಕಾಸಗಳಿಗೆ ಅನ್ವಯಿಸಿದೆ.

## ೧೦

ಮಂತ್ರ :—ಅನ್ಯದೇವಾಹುರ್ವಿದ್ಯಯಾ
ಅನ್ಯದಾಹುರವಿದ್ಯಯಾ ॥
ಇತಿ ಶುಶ್ರುಮ ಧೀರಾಣಾಂ
ಯೇನಸ್ತದ್ವಿಚಚಕ್ಷಿರೇ ॥ ೧೦ ॥

ಪದಪಾಠ :—ಅನ್ಯತ್, ಏವ, ಆಹುಃ, ವಿದ್ಯಯಾ, ಅನ್ಯತ್, ಆಹುಃ, ಅವಿದ್ಯಯಾ । ಇತಿ, ಶುಶ್ರುಮ, ಧೀರಾಣಾಂ, ಯೇ, ನಃ, ತತ್, ವಿಚಚಕ್ಷಿರೇ ॥

**ಅರ್ಥ :....**(ಆ ಆತ್ಮತತ್ತ್ವ) ವಿದ್ಯೆಯಿಂದ ಬೇರೆಯೆಂದೂ ಹೇಳಲ್ಪಟ್ಟಿದೆ. ಅವಿದ್ಯೆಯಿಂದಲೂ ಬೇರೆಯೆಂದೂ ಹೇಳಲ್ಪಟ್ಟಿದೆ. ಯಾರು ನಮಗೆ ಇದರ ದರ್ಶನ ಮಾಡಿಸಿದಾರೋ ಅಂಥ ಧೀರಪುರುಷರಿಂದ ನಾವು ಹೀಗೆಂದು ಕೇಳಿದೇವೆ.

### ಟಿಪ್ಪಣಿ

(೧೦೭) 'ವಿದ್ಯಯಾ', 'ಅವಿದ್ಯಯಾ' ಇದರಲ್ಲಿನ ತೃತೀಯಾ ವಿಭಕ್ತಿ ಪಂಚಮೀ ಅರ್ಥದಲ್ಲಿದೆ. ಈ ಮಾತು ೧೩ನೆಯ ಮಂತ್ರ

ದಿಂದ ಗಮನಕ್ಕೆ ಬರುತ್ತದೆ. ಈ ರೀತಿಯಲ್ಲಿ ತೃತೀಯೆ ಪಂಚಮ್ಯರ್ಥ ಯಾಗಲು ಸಾಧ್ಯವಿದೆ. ವೇದದಲ್ಲಿ ಅದು ಆ ರೀತಿ ಅನೇಕ ಬಾ ಬಂದಿದೆ. ಅಲ್ಲದೆ ಇದೇ ಸ್ಥಳದಲ್ಲಿ ಯಜುರ್ವೇದದ ಮಾಧ್ಯಂದಿನ ಪಾ ದಲ್ಲಿ 'ವಿದ್ಯಾಯಾಃ' ಮತ್ತು 'ಅವಿದ್ಯಾಯಾಃ' ಎಂದೇ ಸ್ಪಷ್ಟವಾಗಿಯ ಪಾಠವಿದೆ. ಅದನ್ನು ವೃತ್ತದ ಸೌಲಭ್ಯಕ್ಕಾಗಿ ಉಪನಿಷತ್ತು ಬದಲ ಮಾಡಿದೆ. ಇಷ್ಟೆ.

(೧೦೮) "ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ" (ಶ್ವೇತಾಶ್ವ ತರ ೫-೧). ವಿದ್ಯೆ, ಅವಿದ್ಯೆ ಇವೆರಡರ ನಿಯಾಮಕನಾದವನು ಇವೆರ ರಿಂದಲೂ ಭಿನ್ನ. ಈ ವಾಕ್ಯದಿಂದ ಪ್ರಸ್ತುತ ಮಂತ್ರದ ವಾಕ್ಯರಚನೆಯ ಮೇಲೆ ಪ್ರಕಾಶ ಬೀಳುತ್ತಿದೆ.

(೧೦೯) ಇಲ್ಲಿ ಮತ್ತು ಮುಂದಿನ ೧೩ನೆಯ ಮಂತ್ರದಲ್ಲಿ, ಆತ್ಮತತ್ತ್ವ ವನ್ನು—ಎಂದರೆ ಬ್ರಹ್ಮವನ್ನು–ತತ್ ಎಂದು ಕರೆದಿದೆ. "ತತ್ತ್ವಮಸಿ" ಯ ಮಹಾವಾಕ್ಯದ ಮೊದಲನೆ ಪದವೇ ಇದು. 'ತತ್' ಎಂದರೆ "ಆ ವಸ್ತು" ಸರ್ವ ದ್ವಂದ್ವಗಳಿಗೆ ಅತ್ತಣದು. ಅದೇ ತಿಳಿಯಬೇಕಾದುದು. ಅದೇ ಹೊಂದಬೇಕಾದುದು. ಅದರಲ್ಲೇ "ತ್ವಂ"ನ ಲಯವನ್ನು ಮಾ ಬೇಕಾದುದು.

(೧೧೦) ಆತ್ಮತತ್ತ್ವ ವಿದ್ಯಾವಿದ್ಯೆಗಳೆರಡರ ಅತ್ತಣದು ಎಂದ ಹೇಳಿದೆ. ಕಾರಣ—ಅದು ನನ್ನ ಸ್ವರೂಪವೇ. ನನ್ನನ್ನು ನಾನೇ ಹೇ ತಿಳಿಯಲಿ? ಹೇಗೆ ತಿಳಿಯದಿರಲಿ?

(೧೧೧) ತಿಳಿವು, ತಿಳಿವಿಲ್ಲದಿರುವುದು, ಇವೆರಡರಿಂದಲೂ ಆತ್ಮತತ್ತ್ವ ಅಥವಾ ಆತ್ಮಜ್ಞಾನ ಭಿನ್ನವಸ್ತು ಎಂಬ ಈ ಮಂತ್ರದ ಅರ್ಥ ಬೇ ಪದಗಳಿಂದ ಕೇನೋಪನಿಷತ್ತಿನಲ್ಲಿ ಕೆಳಗಿನ ಶ್ಲೋಕದಲ್ಲಿ ಸಿಕ್ಕುತ್ತದೆ.

ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ ।
ಇತಿ ಶುಶ್ರುಮ ಪೂರ್ವೇಷಾಂ ಯೇನಸ್ತದ್ವ್ಯಾಚಚಕ್ಷಿರೇ

(ಕೇನ-೧-೩)

(೧೧೨) "ಅನ್ಯದೇವಾಹುರ್ವಿದ್ಯಯಾ", ಆತ್ಮಜ್ಞಾನ ಅವಿದ್ಯೆ ಯಿಂದ ಭಿನ್ನವೆಂಬುದು ಸಹಜವಾಗಿ ಗಮನಕ್ಕೆ ಬರುತ್ತದೆ. ಆದರೆ ಅದು ವಿದ್ಯೆಗೂ ಅತ್ತಕಡೆ ಇರುವುದೆಂಬ ವಿಶೇಷವನ್ನು ತಿಳಿಯಬೇಕು. ಅದಕ್ಕಾಗಿಯೇ "ಏವ" ಕಾರವನ್ನು ಪ್ರಯೋಗಮಾಡಿದೆ.

## ೧೧

ಮಂತ್ರ :—ವಿದ್ಯಾಂಚಾವಿದ್ಯಾಂ ಚ
ಯಸ್ತದ್ವೇದೋಭಯಂ ಸಹ ||
ಅವಿದ್ಯಯಾ ಮೃತ್ಯುಂ ತೀರ್ತ್ವಾ
ವಿದ್ಯಯಾಮೃತಮಶ್ನುತೇ || ೧೧ ||

ಪದಪಾಠ: ವಿದ್ಯಾಂ, ಚ, ಅವಿದ್ಯಾಂ, ಚ, ಯಃ, ತತ್, ವೇದ, ಉಭಯಂ, ಸಹ| ಅವಿದ್ಯಯಾ, ಮೃತ್ಯುಂ, ತೀರ್ತ್ವಾ, ವಿದ್ಯಯಾ, ಅಮೃತಂ, ಅಶ್ನುತೇ ||

**ಅರ್ಥ :**—ವಿದ್ಯೆ, ಅವಿದ್ಯೆ ಇವೆರಡರೊಡನೆ ಯಾರು ಆ ಆತ್ಮತತ್ತ್ವವನ್ನು ತಿಳಿಯುತ್ತಾರೋ, ಅವರು (ಆತ್ಮತತ್ತ್ವದ ಆಧಾರದಿಂದ) ಅವಿದ್ಯೆಯಿಂದ ಮೃತ್ಯುವನ್ನು ದಾಟಿ, ವಿದ್ಯೆಯಿಂದ ಅಮೃತವನ್ನು ಹೊಂದುತ್ತಾರೆ.

### ಟಿಪ್ಪಣಿ

(೧೧೩) ಇಲ್ಲಿ ವಿದ್ಯೆ ಅವಿದ್ಯೆಯ ಸಮುಚ್ಚಯವನ್ನು ಉಪದೇಶ ಮಾಡಿರುವಂತೆ ಕಾಣುತ್ತದೆ. ಆದರೆ ಅದು ಒಂದು ಭಾಸ್ಯದ್ದು. ಎಲ್ಲಿ ಎರಡೂ ಸಾಧನೆಗಳು ಸಾಮರ್ಥ್ಯವಂತವಾಗಿ, ಅವೆರಡರ ಸಂಯೋಗದಿಂದ ಒಂದು ವಿಶೇಷ ನಿಷ್ಪತ್ತಿ ಆಗುತ್ತದೆಯೋ, ಅಲ್ಲಿ ಅದನ್ನು ಸಮುಚ್ಚಯ ಎನ್ನತಕ್ಕದ್ದು. ಆದರೆ ಇಲ್ಲಿ ಒಂದೊಂದೇ ಅಸಮರ್ಥವಲ್ಲದಿದ್ದರೂ ಅನರ್ಥಕಾರಿಯಾಗಿರುವುದರಿಂದ, ಎರಡೂ ಸೇರಿ ಒಂದೇ ಸಾಧನೆಯಾಗುತ್ತದೆ. ಸಮುಚ್ಚಯ ಸಿದ್ಧಿಸುವುದಿಲ್ಲ.

(೧೧೪) ವಿದ್ಯೆ, ಅವಿದ್ಯೆ ಎರಡೂ ಒಂದೊಂದೇ ಆದರೆ ದೂಷಿತವಾಗುವುದರಿಂದ ಎರಡರ ಯೋಗವೇ ಬೇಕು ಎಂಬುದೇ ಇಲ್ಲಿ ಹೇಳಬೇಕಾದುದು. ಆದರೂ ಅವಲ್ಲದೆ ಮೂರನೆಯ ಒಂದು ವಸ್ತುವಿನ ಕಡೆ,

ಆತ್ಮಜ್ಞಾನದ ಕಡೆ ಗಮನ ಕೊಡಬೇಕು. ಆ ಮೂರನೆಯ ವಸ್ತುವಿನ ಆಧಾರದಿಂದಲೇ ಇವೆರಡರ ಯೋಗ ಸಫಲವಾಗುತ್ತದೆ.

(೧೧೫) ಆತ್ಮಜ್ಞಾನದ ಕಡೆ ಮನುಷ್ಯನಿಗೆ ದೃಷ್ಟಿಯಿದ್ದರೆ, ಅವಿದ್ಯೆಯ ಬಲದಿಂದ ವ್ಯರ್ಥಜ್ಞಾನಗಳನ್ನು ತೊರೆದು, ಎಂದರೆ ಅನಾತ್ಮ ವಿಷಯಗಳಿಂದ ಬುದ್ಧಿಯನ್ನು ದೂರ ಸರಿಸಿ, ಸಹಜವಾಗಿಯೆ "ಆವೃತ್ತಚಕ್ಷುಃ" ಆಗುತ್ತಾನೆ. ವಿದ್ಯಾಬಲದಿಂದ ಆತ್ಮಚಿಂತನೆಮಾಡಿ, ಅಕ್ಷಯ ಅಮೃತದ ನಿಧಿಯನ್ನು ಪಡೆಯುತ್ತಾನೆ. ವಿದ್ಯೆ, ಅವಿದ್ಯೆಗಳನ್ನು ಈ ರೀತಿ ಆತ್ಮಜ್ಞಾನಾರ್ಥವಾಗಿ ಬಳಸುವುದರಿಂದ ಇವೆರಡೂ ಉಪಕಾರಕಗಳಾಗಿ ಸಾಧನರೂಪಿಗಳಾಗುತ್ತವೆ.

(೧೧೬) ಮೃತ್ಯುವನ್ನು ದಾಟಿ ಹೋಗುವುದು, ಅಮೃತವನ್ನು ಪಡೆಯುವುದು, ಇವೆರಡೂ ಒಂದೇ ಫಲದ ನಿವೃತ್ತ ಪ್ರವೃತ್ತ ಅಂಗಗಳು. ನದಿಯನ್ನು ದಾಟುವುದು, ಆತ್ತಣ ತೀರದ ಹಣ್ಣನ್ನು ತಿನ್ನುವುದು—ಈ ರೀತಿ ಒಂದು ಪೂರ್ಣ ಕಾರ್ಯಕ್ರಮ.

(೧೧೭) ಶ್ವೇತಾಶ್ವತರದಲ್ಲಿ ಹೀಗೊಂದು ವಾಕ್ಯ ಬಂದಿದೆ.

"ಕ್ಷರಂ ತ್ವವಿದ್ಯಾಹ್ಯಮೃತಂತು ವಿದ್ಯಾ ।
ವಿದ್ಯಾವಿದ್ಯೇ ಈಶತೇ ಯಸ್ತುಸೋಽನ್ಯಃ ॥ (ಶ್ವೇ. ೫-೧.)

ಹತ್ತನೇ ಮಂತ್ರದ ವಾಕ್ಯರಚನೆ ಸ್ಪಷ್ಟವಾಗಲೆಂದು ಈ ವಾಕ್ಯದ ಉತ್ತರಾರ್ಧವನ್ನು ನೀವು ಹಿಂದೆ ನೋಡಿದ್ದಿರಿ. (ಟಿ. ೧೦೮). ಅದರ ಪೂರ್ವಾರ್ಧದಲ್ಲಿ ಅವಿದ್ಯೆಯನ್ನು 'ಕ್ಷರ' ವೆಂದೂ ವಿದ್ಯೆಯನ್ನು 'ಅಮೃತ' ವೆಂದೂ ಕರೆದಿದೆ. ಅವಿದ್ಯೆಗೆ ಕ್ಷರ ಫಲ, ವಿದ್ಯೆಗೆ ಅಮೃತ ಫಲ ಎಂದು ಅದರ ಅರ್ಥ. ಅವಿದ್ಯೆ ನಕಾರಾತ್ಮಕವಾಗಿರುವುದರಿಂದ ಅದರ ಫಲವೂ ನಕಾರಾತ್ಮಕ; ಜಾರುವಂಥದು (ಕ್ಷರ). ಆದುದರಿಂದ ಅದರ ಮೇಲೆ ಒರಗಿರದೆ ಭಾವಾತ್ಮಕ ಫಲ ಸಿಗುವಪರ್ಯಂತ ಪ್ರಯತ್ನಮಾಡುತ್ತಿರಬೇಕು; ಇಷ್ಟು ಸೂಚನೆಯನ್ನು ಅದರಿಂದ ತೆಗೆದುಕೊಳ್ಳತಕ್ಕದ್ದು.

(೧೧೮) ಈ ಮಂತ್ರಕ್ಕೆ ಸಮಾನಾರ್ಥವಾದ ಈ ಮನುವಿನ ಶ್ಲೋಕವನ್ನು ಹೇಳಬಹುದು.

"ತಪೋ ವಿದ್ಯಾ ಚ ವಿಪ್ರಸ್ಯ ನಿಃಶ್ರೇಯಸಕರಂ ಪರಂ ।
ತಪಸಾ ಕಿಲ್ಬಿಷಂ ಹಂತಿ ವಿದ್ಯಯಾಮೃತಮಶ್ನುತೇ ॥"

ವಸ್ತುತಃ ಈ ಶ್ಲೋಕಕ್ಕೆ ಪ್ರಕೃತ ಮಂತ್ರದೊಂದಿಗೆ ಹೊಂದಿಕೆ ಇಲ್ಲ. ತಪಸ್ಸು ವಿದ್ಯೆ ಎರಡನ್ನೂ ಮನು ನಿಃಶ್ರೇಯಸಕರವಾದ ಸಮರ್ಥ ಸಾಧನಗಳೆಂದು ಕಲ್ಪಿಸಿದಾನೆ. ಇಲ್ಲಿ ಕೇವಲ ಅವಿದ್ಯೆ, ಕೇವಲ ವಿದ್ಯೆಗಳನ್ನು ಗಾಢಾಂಧಕಾರ ಎಂದಿದೆ. ಆದುದರಿಂದ 'ಅವಿದ್ಯೆ'ಗೆ ಅರ್ಥ 'ತಪಸ್ಸು' ಎನ್ನಲಾಗದು. ಹಾಗೆ ಅರ್ಥಮಾಡುವುದೆಂದರೆ ಅವಿದ್ಯಾ ಶಬ್ದಕ್ಕೆ ಲಕ್ಷಣಾರ್ಥವಾದೀತು. ಶ್ರುತಿಗೆ ಅರ್ಥ ಹಚ್ಚುವಲ್ಲಿ ಲಕ್ಷಣಾರ್ಥ ಯುಕ್ತವಲ್ಲ.

(೧೧೯) 'ಅವಿದ್ಯೆ' ಯೆಂದರೆ 'ಕರ್ಮ' ವೆಂದೂ ಅರ್ಥಮಾಡಲ್ಪಟ್ಟಿದೆ. ಅದೂ ಸರಿಯಲ್ಲ. ಕರ್ಮವನ್ನು ಗಾಢಾಂಧಕಾರವೆನ್ನುವ ಕಲ್ಪನೆ ಈಶಾವಾಸ್ಯದಲ್ಲಿಲ್ಲ. ಅದರ ವ್ಯತಿರಿಕ್ತ ಕಲ್ಪನೆಯೇ ಇದೆ ಎಂಬುದು ೨ನೆ, ೩ನೆ ಮಂತ್ರಗಳನ್ನು ಒಂದೆಡೆಮಾಡಿ ಓದಿದರೆ ಮನದಟ್ಟಾದೀತು. ಅಲ್ಲದೆ ಅವಿದ್ಯೆಯೆಂದರೆ ಕರ್ಮ ಎಂಬುದು ಯಥಾಶ್ರುತ ಅರ್ಥವೂ ಅಲ್ಲ.

(೧೨೦) ಜ್ಞಾನ-ಕರ್ಮ-ಸಮುಚ್ಚಯ ಲೋಭದಿಂದ ಇಲ್ಲಿ ವಿದ್ಯೆಯ ಅರ್ಥವನ್ನು ಆತ್ಮಜ್ಞಾನ ಎಂದು ಕೆಲವರು ಮಾಡಿದಾರೆ. ಕಲ್ಪನಾ ಶಕ್ತಿಯನ್ನು ಎಷ್ಟು ವಿಸ್ತರಿಸಿದರೂ ಆತ್ಮಜ್ಞಾನವನ್ನು ಗಾಢಾಂಧಕಾರವೆಂದೂ, ಅವಿದ್ಯೆಗಿಂತಲೂ ಬಹಳ ಹೆಚ್ಚಾದುದೆಂದೂ ಹೇಗೆ ಹೇಳಲಾದೀತು? ಇದು ಗಮನಕ್ಕೆ ಬಾರದು. ವಸ್ತುತಃ ಆತ್ಮಜ್ಞಾನದ ಸರ್ವೋಚ್ಚಮಹಿಮೆಯನ್ನು ಪ್ರಕಟಮಾಡಲಿಕ್ಕೆ ಈ ಮಂತ್ರ ಉಕ್ತವಾಗಿದೆ ಎಂದು ಸರಳ ಅನ್ವಯಾರ್ಥ ತಿಳಿಸುತ್ತದೆ.

## ೧೨

ಮಂತ್ರ :—ಅಂಧಂತಮಃ ಪ್ರವಿಶಂತಿ
ಯೇಽಸಂಭೂತಿಮುಪಾಸತೇ ।
ತತೋ ಭೂಯ ಇವ ತೇ ತಮೋ
ಯ ಉ ಸಂಭೂತ್ಯಾಂ ರತಾಃ ॥ ೧೨ ॥

**ಪದಪಾಠ :—** ಅಂಧಂತಮಃ, ಪ್ರವಿಶಂತಿ, ಯೇ, ಅಸಂಭೂತಿಂ, ಉಪಾ-ಸತೇ । ತತಃ, ಇವ, ತೇ, ತಮಃ, ಯೇ, ಉ, ಸಂಭೂತ್ಯಾಂ, ರತಾಃ ॥

**ಅರ್ಥ :—** ಯಾರು ನಿರೋಧದಲ್ಲಿಯೇ ಮಗ್ನರಾಗಿರುತ್ತಾರೋ ಅವರು ಗಾಢಾಂಧಕಾರದಲ್ಲಿ ಮುಳುಗಿದರು. ಯಾರು ವಿಕಾಸದಲ್ಲಿ ರಮಿಸುತ್ತಾರೋ ಅವರು ಅದಕ್ಕಿಂತಲೂ ಹೆಚ್ಚಾದ ಕತ್ತಲಲ್ಲಿ ಮುಳುಗಿದರು.

## ಟಿಪ್ಪಣಿ

(೧೨೧) ಹಿಂದಿನ ಮೂರು ಶ್ಲೋಕಗಳಲ್ಲಿ ಬುದ್ಧಿಯ ಶೋಧನೆಯಾಯಿತು. ಈಗ ಇಲ್ಲಿಂದ ಹೃದಯದ ಶೋಧನೆ.

(೧೨೨) ಅಸದ್ವೃತ್ತಿಗಳ ನಿರೋಧ, ಸದ್ವೃತ್ತಿಗಳ ವಿಕಾಸ, ಇವೆರಡೂ ಹೃದಯ ಶೋಧನೆಯ ನಿವೃತ್ತ ಮತ್ತು ಪ್ರವೃತ್ತ ಅಂಗಗಳು. ಅದಕ್ಕನುಸಾರವಾಗಿ ಅವುಗಳ ಫಲಗಳನ್ನು ನಿವೃತ್ತ-ಪ್ರವೃತ್ತ ಸ್ವರೂಪಗಳಲ್ಲಿ ತೋರಿಸಲಾಗಿದೆ.

(೧೨೩) ಇಲ್ಲಿನ 'ಸಂಭೂತಿ' 'ಅಸಂಭೂತಿ' ಶಬ್ದಗಳ ಅರ್ಥದ ಬಗ್ಗೆ ಒಮ್ಮತವಿಲ್ಲ ಇನ್ನು ಮುಂದೆ ಹಾಗಾದೀತೆಂದು ಹೆಚ್ಚು ಆಸೆ ಇಡಲು ಸಾಧ್ಯವಿಲ್ಲ. ಇಲ್ಲಿ ಮಾಡಿರುವ ಅರ್ಥ-ನಿಶ್ಚಯದ ವಿಷಯವಾಗಿ ವೈದಿಕ ವಾಙ್ಮಯದಲ್ಲಿ ಉಪಲಬ್ಧ ಭಾಗವೆಲ್ಲವನ್ನೂ ತೆಗೆದುಕೊಂಡು ಈ ಅರ್ಥಮಾಡಿದೆಯೆಂದು, ಇಷ್ಟು ಮಾತ್ರ ಹೇಳಬಹುದು.

(೧೨೪) ವಿಧಾಯಕ ವಿಕಾಸ-ದೃಷ್ಟಿ ಇಲ್ಲದಲ್ಲಿ ಕೇವಲ ನಿರೋಧ ರೂಪಿಯಾದ ನಿಷೇಧಕ ಸಾಧನೆ ಮೈಮೇಲೆ ಏರಿಬರುತ್ತದೆ. ಅಶುಭ ವೃತ್ತಿಯ ನಿರೋಧ ಎನ್ನುತ್ತ ಎನ್ನುತ್ತ ಅದೇ ವೃತ್ತಿ ದೃಢವಾಗುತ್ತದೆ. ಇದೇ ನಿರೋಧದಲ್ಲಿನ ಕಗ್ಗತ್ತಲು. ಇದಕ್ಕೆ ವ್ಯತಿರಿಕ್ತ ಪಕ್ಷದಲ್ಲಿ ನಿರೋಧ ಶೂನ್ಯವಾದ ಕೇವಲ ವಿಕಾಸದ ಕಲ್ಪನೆಯಲ್ಲಿ ಇದಕ್ಕಿಂತಲೂ ಅಧಿಕವಾದ ಕಗ್ಗತ್ತಲು ನಿರ್ಮಿತವಾಗುವುದು ಕಂಡುಬರುತ್ತದೆ. ಗುಣವಿಕಾಸದ ಹೆಸರಿನಲ್ಲಿ ಮನುಷ್ಯ ತನ್ನ ಅರಿವಿಲ್ಲದೆಯೆ ಅನೇಕ ವಿಧ ವಿಷಯ ಪಾಶಗಳಿಂದ ಬಿಡಿಸಿಕೊಳ್ಳಲಾಗದಂತೆ ಬಿಗಿಯಲ್ಪಡುತ್ತಾನೆ. ಎರಡೂ ಕಡೆಯ

ಲ್ಲಿಯೂ ಹೀಗೆ ಅಂಧಕಾರದ ಒಂದು ನಮೂನೆಯನ್ನು ಮಾತ್ರ ತೋರಿಸಿದೆ. ಆತ್ಮಜ್ಞಾನ ಶೂನ್ಯವಾದ ಏಕಾಂತಿಕ ಬೌದ್ಧಿಕ ಸಾಧನೆಯಲ್ಲಿ ಹೇಗೋ ಆತ್ಮಜ್ಞಾನ ವಿಹೀನ ಹಾರ್ದಿಕ ಸಾಧನೆಯಲ್ಲೂ ಹಾಗೆ, ಅನೇಕ ಪ್ರಕಾರದ ಅಂಧಕಾರ ತುಂಬಿರುತ್ತದೆ. ಅವರವರೇ ಶೋಧನೆ ಮಾಡಿ ತಿಳಿದುಕೊಳ್ಳಬೇಕು. ಅವನ್ನೆಲ್ಲಾ ನಿರ್ಮೂಲ ಮಾಡಲೆಂದೇ ಆತ್ಮಜ್ಞಾನ.

## ೧೩

ಮಂತ್ರ :—ಅನ್ಯದೇವಾಹುಃ ಸಂಭವಾತ್
ಅನ್ಯದಾಹುರಸಂಭವಾತ್ ।
ಇತಿ ಶುಶ್ರುಮ ಧೀರಾಣಾಂ
ಯೇ ನಸ್ತದ್ವಿಚಚಕ್ಷಿರೇ ॥ ೧೩ ॥

ಪದಪಾಠ :—ಅನ್ಯತ್, ಏವ, ಆಹುಃ, ಸಂಭವಾತ್, ಅನ್ಯತ್, ಆಹುಃ, ಅಸಂಭವಾತ್ । ಇತಿ, ಶುಶ್ರುಮ, ಧೀರಾಣಾಂ, ಯೇ, ನಃ, ತತ್, ವಿಚಚಕ್ಷಿರೇ ॥

ಅರ್ಥ :—(ಆತ್ಮತತ್ತ್ವ) ವಿಕಾಸದಿಂದ ಬೇರೆಯಾದುದೆಂದು ಹೇಳಲ್ಪಟ್ಟಿದೆ. ನಿರೋಧದಿಂದಲೂ ಬೇರೆಯೆಂದೂ ಹೇಳಲ್ಪಟ್ಟಿದೆ. ಅದರ ದರ್ಶನವನ್ನು ಮಾಡಿಸಿಕೊಟ್ಟ ಆ ಧೀರಪುರುಷನಿಂದ ನಾವು ಈ ರೀತಿ ಕೇಳಿದೇವೆ.

## ಟಿಪ್ಪಣಿ

(೧೩೫) ವಿಕಾಸ, ನಿರೋಧ ಎರಡರಿಂದಲೂ ಆತ್ಮತತ್ತ್ವ ದೂರವಿದೆ ಎಂದು ಹೇಳಿದೆ. ಏಕೆಂದರೆ, ಅದೇ ನನ್ನ ಸ್ವರೂಪ. ನನ್ನನ್ನೇ ನಾನು ಹೇಗೆ ವಿಕಾಸಗೊಳಿಸಲಿ ? ಹೇಗೆ ನಿರೋಧಿಸಲಿ ?

(೧೩೬) 'ಅನ್ಯದೇವಾಹುಃ ಸಂಭವಾತ್.' ಆತ್ಮಜ್ಞಾನ ಬೇರೆ, ನಿರೋಧ ಬೇರೆ. ಇದು ಸಹಜವಾಗಿ ಗಮನಕ್ಕೆ ಬರುತ್ತದೆ. ವಿಕಾಸದ ಪರಮಾವಸ್ಥೆಯೇ ಆತ್ಮಜ್ಞಾನವೆಂಬ ಕಲ್ಪನೆ ಬಳಕೆಯಲ್ಲಿ ಬಂದಿರುವುದರಿಂದ, ವಿಕಾಸದಿಂದಲೂ ಅದು ಭಿನ್ನ ಎಂಬ ವಿಷಯವನ್ನು ತಿಳಿಯಬೇಕು. ಅದಕ್ಕೆಂದೇ 'ಏವ' ಕಾರವನ್ನು ಪ್ರಯೋಗಿಸಿದೆ.

(೧೨೭) 'ಸಂಭೂತಿ' 'ಅಸಂಭೂತಿ' ಗಳ ಬದಲು 'ಸಂಭವ', 'ಅಸಂಭವ' ಶಬ್ದಗಳು ಕೇವಲ ವೃತ್ತಸೌಲಭ್ಯಕ್ಕಾಗಿ ಬಂದಿವೆ.

(೧೨೮) ಉಭಯ ವಿಧ ಬೌದ್ಧಿಕ ಸಾಧನೆಯೂ ಅಲ್ಲ, ಉಭಯ ವಿಧ ಹಾರ್ದಿಕ ಸಾಧನೆಯೂ ಅಲ್ಲ; ಆತ್ಮಜ್ಞಾನ ಬೇರೆ ವಸ್ತುವೆಂಬು ದನ್ನು ಉಪನಿಷತ್ತುಗಳೇ ತಿಳಿಸಬೇಕು. ಆದರೆ ಅವೂ ಕೂಡ 'ಪೂರ್ವ 'ಗುರುವಿಲ್ಲದೆ ಜ್ಞಾನವುಂಟೆ' ಎನ್ನುತ್ತವೆ–ಎಂಬುದೇ ಇದರ ನಿಷ್ಕರ್ಷೆ.

(೧೨೯) ಇಲ್ಲಿ ಮತ್ತು ಹಿಂದಿನ ೧೦ ನೆಯ ಮಂತ್ರದಲ್ಲಿ ಗುರುವಿಗೆ 'ಧೀರ' ಶಬ್ದವನ್ನು ಬಳಸಿದೆ. 'ಧೀ' ಶಬ್ದದಿಂದ 'ಧೀರ' ಎಂದರೆ 'ಬುದ್ಧಿವಂತ' ಎಂದು ಅರ್ಥ. 'ಧೃ' ಧಾತುವಿನಿಂದ 'ಧೀರ' ಎಂದರೆ "ಧೃತಿಯುಳ್ಳವನು" ಎಂದರ್ಥ. ಹಿಂದೆ ಬುದ್ಧಿಶೋಧನೆಯ ಪ್ರಕರಣ ವಿತ್ತಾಗಿ, ಅಲ್ಲಿ ಮುಖ್ಯತಃ ಮೊದಲನೆಯ ಅರ್ಥ, ಇಲ್ಲಿ ಹೃದಯ ಶೋಧ ನೆಯ ಪ್ರಕರಣವಿರುವುದರಿಂದ ಮುಖ್ಯತಃ ಎರಡನೆಯ ಅರ್ಥ ಲಕ್ಷ್ಯದಲ್ಲಿದೆ. ಎರಡೂ ಸೇರಿ ಪೂರ್ಣಧೀರತೆ.

(೧೩೦) "ಇತಿ ಶುಶ್ರುಮ." "ಶ್ರುತಿ, ಸ್ಮೃತಿ, ಕೃತಿ"—ಇದು ಉಪ ನಿಷತ್ತುಗಳ ಸಂಕ್ಷಿಪ್ತ ಜ್ಞಾನಪ್ರಕ್ರಿಯೆ. ಗುರುಮುಖೇನ ಶ್ರವಣ ಮಾಡ ತಕ್ಕದ್ದು. ಅದನ್ನೇ ಮನನ ಪೂರ್ವಕ ಬಾರಿಬಾರಿಗೂ ತಿಳಿಯುವುದು. ಅದಕ್ಕನುಸಾರವಾಗಿ ಕೃತಿಮಾಡಿ, ಅದೇ ಒರೆಗಲ್ಲಿನಮೇಲೆ ತಿಕ್ಕತಕ್ಕದ್ದು. ಹಿಂದೆ 'ಉಪನಿಷತ್' ಶಬ್ದದ ವ್ಯಾಖ್ಯಾನ ಮಾಡುವಾಗ ಈ ಪ್ರಕ್ರಿಯೆ ಯನ್ನು ನೀವು ನೋಡಿಯೇ ಇದೀರಿ.

(೧೩೧) "ವಿಚಚಕ್ಷಿರೇ" ಎಂದರೆ ವ್ಯಾಖ್ಯಾನ ಮಾಡಿ ಹೇಳಿದರು, ತಿಳಿಸಿಕೊಟ್ಟರು ಎಂದರ್ಥಮಾಡಲ್ಪಡುತ್ತದೆ. ಅದು ಸರಿಯೆ. ಆದರೆ 'ವಿಚಚಕ್ಷಿರೇ' ಯ ಮಧ್ಯೆ 'ಚಕ್ಷ್' ಧಾತು ಇದ್ದು ಅದರ ಸಂಬಂಧ 'ಚಕ್ಷ್' ಶಬ್ದದೊಡನೆ ಇರುತ್ತದೆಂದರೆ 'ದರ್ಶನಮಾಡಿಸಿ ಕೊಟ್ಟರು'— ಎಂದು ಅದರ ಅರ್ಥ ಅಭಿಪ್ರೇತವಾಗುತ್ತದೆ. ಶಿಷ್ಯನಿಗೆ ಜ್ಞಾನದ ಸಾಕ್ಷಾತ್ಕಾರ ಮಾಡಿ ಕೊಡುವುದೇ ಗುರುವಿನ ವೈಶಿಷ್ಟ್ಯ. ಜ್ಞಾನ ಅನುಭವವಾಗಿ ಪರಿಣಮಿಸದ ವಿನಾ ಅದಕ್ಕೆ ಸಫಲತೆಯಿಲ್ಲ.

## ೧೪

ಮಂತ್ರ :—ಸಂಭೂತಿಂ ಚ ವಿನಾಶಂ ಚ
ಯಸ್ತದ್ವೇದೋಭಯಂ ಸಹ ||
ವಿನಾಶೇನ ಮೃತ್ಯುಂ ತೀರ್ತ್ವಾ
ಸಂಭೂತ್ಯಾಮೃತಮಶ್ನುತೇ || ೧೪ ||

ಪದಪಾಠ :— ಸಂಭೂತಿಂ, ಚ, ವಿನಾಶಂ, ಚ, ಯಃ, ತತ್, ವೇದ, ಉಭಯಂ, ಸಹ | ವಿನಾಶೇನ, ಮೃತ್ಯುಂ, ತೀರ್ತ್ವಾ, ಸಂಭೂತ್ಯಾ, ಅಮೃತಂ, ಅಶ್ನುತೇ ||

ಅರ್ಥ :—ವಿಕಾಸ, ನಿರೋಧ ಇವೆರಡರೊಡನೆ ಯಾರು ಆತ್ಮತತ್ವವನ್ನು ತಿಳಿಯುತ್ತಾರೋ, ಅವರು (ಆ ಆತ್ಮತತ್ವದ ಆಧಾರದ ಮೇಲೆ) ನಿರೋಧದಿಂದ ಮೃತ್ಯುವನ್ನು ದಾಟಿ, ವಿಕಾಸದಿಂದ ಅಮೃತವನ್ನು ಹೊಂದುತ್ತಾರೆ.

### ಟಿಪ್ಪಣಿ

(೧೩೨) ಈ ಮಂತ್ರದಲ್ಲಿ 'ಅಸಂಭೂತಿ' ಶಬ್ದದ ಬದಲು, 'ವಿನಾಶ' ಎಂಬ ಅದರ ಪರ್ಯಾಯವನ್ನು ಜೋಡಿಸಿದೆ. ಅದರ ಕಾರಣ ಹೀಗೆ— ದೋಷ ನಿವೃತ್ತಿ ಅಥವಾ ನಿರೋಧ ಎರಡು ವಿಭಾಗವುಳ್ಳದ್ದು: ೧. ಹೊಸ ದೋಷ ಅಂಟಲು ಅವಕಾಶ ಕೊಡದಿರುವುದು. ೨. ಹಿಂದೆ ಅಂಟಿದುದನ್ನು ತೆಗೆದುಹಾಕುವುದು. 'ಅಸಂಭೂತಿ' ಶಬ್ದದ ಅಕ್ಷರಾರ್ಥದಿಂದ ಮುಖ್ಯವಾಗಿ ಮೊದಲ ಭಾಗ ಸೂಚಿತವಾಗುತ್ತದೆ. ಎರಡನೆಯ ಭಾಗದ ಸೂಚನೆಗಾಗಿ 'ವಿನಾಶ' ಶಬ್ದವಿದೆ. ಯೋಗಶಾಸ್ತ್ರ 'ನಿರೋಧ' ಶಬ್ದದಲ್ಲಿ ಎರಡೂ ಭಾಗಗಳನ್ನು ಅಡಕಮಾಡುತ್ತದೆ.

(೧೩೩) ಇಲ್ಲಿಯ 'ವಿನಾಶ' ಶಬ್ದ ಅವಿದ್ಯೆಯ ಎರಡು ಭಾಗಗಳನ್ನು ಸೂಚಿಸುತ್ತದೆ. (೧) ವ್ಯರ್ಥ ಹೊರೆಯಾದ ಜ್ಞಾನವನ್ನು ಸೇರಿಸದಿರುವುದು. (೨) ಹಿಂದೆ ಸಂಚಿತವಾದುದನ್ನು ಮರೆಯುವುದು.

(೧೩೪) ಆತ್ಮಜ್ಞಾನದ ತಳಮಳವಿತ್ತೆಂದರೆ ಮನುಷ್ಯ ನಿರೋಧ-ಬಲದಿಂದ ವಿಷಯ— ವಶೀಕಾರ ರೂಪವಾದ ವೈರಾಗ್ಯವನ್ನು ಸಂಪಾದಿಸುತ್ತಾನೆ. ಇಷ್ಟಾಯಿತೆಂದರೆ ಸಾಧಕ ಮೃತ್ಯುವನ್ನು ದಾಟಿಹೋದನೆಂದೇ ಹೇಳಬೇಕು. ಮುಂದೆ ವಿಕಾಸದ ಬಲದಿಂದ ಓತ-ಪ್ರೋತವಿಶ್ವಪ್ರೇಮದ

ಅಭ್ಯಾಸಮಾಡಿ ಅಕ್ಷಯ ಅಮೃತ ಸ್ಥಾನವನ್ನು ಸಂಪಾದಿಸುತ್ತಾನೆ. ನಿರೋಧ, ವಿಕಾಸ ಇವೆರಡನ್ನೂ ಈ ಪ್ರಕಾರ ಆತ್ಮಜ್ಞಾನಾರ್ಥ ಬಳಸುವುದರಿಂದ ಎರಡೂ ಉಪಕಾರಿಗಳಾಗಿ ಸಾಧನರೂಪವಾಗುತ್ತವೆ.

(೧೩೫) ಹಿಂದೆ ೧೧೩ ನೇ ಟಿಪ್ಪಣಿಯಲ್ಲಿ ತೋರಿಸಿದಂತೆ ಇಲ್ಲಿಯೂ ಸಮುಚ್ಚಯ ಅಭಿಪ್ರೇತವಾಗದೆ, ಉಭಯ ದೋಷವರ್ಜಿತವಾದ, ಉಭಯ ಗುಣಸಂಪನ್ನವಾದ, ಒಂದು ಅವ್ಯಂಗ, ಪರಿಪೂರ್ಣಸಾಧನೆ ಅಭಿಪ್ರೇತವಾಗಿದೆ.

(೧೩೬) ಮಾಧ್ಯಂದಿನ ಪಾಠದಲ್ಲಿ ೧೨-೧೩-೧೪ ಮಂತ್ರಗಳನ್ನು ಮೊದಲಿಗೆ ಹಾಕಿ ೯-೧೦-೧೧ ಮಂತ್ರಗಳನ್ನು ಮುಂದೆ ಕೊಟ್ಟಿದೆ. ಬುದ್ಧಿಶೋಧನೆ ಮೊದಲೋ ಹೃದಯಶೋಧನೆ ಮೊದಲೋ? ಇವೆರಡರಲ್ಲಿ ಯಾವುದು ಅಧಿಕ ಮಹತ್ವದ್ದು? ಈ ವಾದ ವ್ಯರ್ಥ. ಅದು ಸಾಧಕರ ಮನಸ್ಸಿನ ಭೂಮಿಕೆಯನ್ನು ಅವಲಂಬಿಸಿರುತ್ತದೆ. ವಸ್ತುತಃ ಎರಡಕ್ಕೂ ಒಂದೇ ಸಮಾನ ಮಹತ್ವ. ಪ್ರಾಯಶಃ ಒಂದೇ ಕಾಲದಲ್ಲಿ ಮಾಡತಕ್ಕದ್ದು. ಹಾಗಿದ್ದರೂ ವಿವೇಚನೆಯನ್ನು ಮಂಡಿಸುವಾಗ ಮೊದಲು ಬುದ್ಧಿಶೋಧನೆ, ಅನಂತರ ಹೃದಯ ಶೋಧನೆ, ಹೀಗೆ ನಿರ್ದೇಶಿಸುವುದು ಹೆಚ್ಚು ಯುಕ್ತ. ಗೀತೆಯೂ ಕೂಡ ಹೀಗೆಯೆ ಸಾಂಖ್ಯಬುದ್ಧಿಯ ಆಧಾರದ ಮೇಲೆ ಯೋಗಬುದ್ಧಿಯನ್ನು ರಚಿಸಿದೆ.

(೧೩೭) ಅಂಧಕಾರದ ಮೂರು ಪ್ರಕಾರಗಳು ಇಲ್ಲಿಯವರೆಗೆ ಸೂಚಿತವಾಗಿವೆ. ಅವುಗಳನ್ನು ಒಂದೆಡೆ ಸೇರಿಸುವುದು ಒಳಿತು.

೧. ಕ್ರಿಯಾಗತ ಅಂಧಕಾರ. (ಮಂತ್ರ ೩)
—ಆತ್ಮಘಾತಕ ಆಸುರೀ ಆಚರಣೆ

೨. ಬುದ್ಧಿಗತ ಅಂಧಕಾರ. (ಮಂತ್ರ ೯)
(ಅ) ಕೇವಲ ಜ್ಞಾನ.
(ಆ) ಕೇವಲ ಅಜ್ಞಾನ.

೩. ಹೃದಯಗತ ಅಂಧಕಾರ. (ಮಂತ್ರ ೧೨)
(ಅ) ಕೇವಲ ನಿರೋಧ.
(ಆ) ಕೇವಲ ವಿಕಾಸ.

ಇವುಗಳಲ್ಲಿ ನೈತಿಕ ಅಂಧಕಾರ ಸರ್ವಥಾ ವರ್ಜನೀಯ. ಬೌದ್ಧಿಕ, ಹಾರ್ದಿಕ ಅಂಧಕಾರಗಳು ಸಂಶೋಧನೆ ಮಾಡಲು ಅರ್ಹ. ಸಂಶೋಧಿಸಲ್ಪಟ್ಟರೆ ಅವು ಸಾಧನರೂಪವಾಗುತ್ತವೆ.

(೧೩೮) ಆದರೆ ಈ ಸಂಶೋಧನೆ ಯಾವುದರಿಂದಾಗತಕ್ಕದ್ದು? ಆತ್ಮಜ್ಞಾನದಿಂದ. ಆತ್ಮಜ್ಞಾನಕ್ಕೇ ಸಂಶೋಧನೆ ಬೇಕು. ಸಾಧನ ಶುದ್ಧಿಯಿಂದ ಆತ್ಮಜ್ಞಾನ, ಆತ್ಮಜ್ಞಾನದಿಂದಲೆ ಸಾಧನ ಶುದ್ಧಿ—ಈ ತೊಡಕನ್ನು ಬಿಡಿಸುವವರಾರು? ಅದಕ್ಕಾಗಿಯೇ ಪ್ರಾರ್ಥನಾ ತತ್ವದ ಅಂದರೆ ಈಶ್ವರ ಭಕ್ತಿಯ ಆವಾಹನೆ ಮುಂದಿನ ಮಂತ್ರದಲ್ಲಿ ಮಾಡಲ್ಪಟ್ಟಿದೆ.

೧೫

ಮಂತ್ರ:—ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಂ ||
ತತ್ವಂ ಪೂಷನ್ನಪಾವೃಣು
ಸತ್ಯಧರ್ಮಾಯ ದೃಷ್ಟಯೇ || ೧೫ ||

ಪದ-ಪಾಠ—ಹಿರಣ್ಮಯೇನ, ಪಾತ್ರೇಣ, ಸತ್ಯಸ್ಯ, ಅಪಿಹಿತಂ, ಮುಖಂ | ತತ್, ತ್ವಂ, ಪೂಷನ್, ಅಪಾವೃಣು, ಸತ್ಯಧರ್ಮಾಯ, ದೃಷ್ಟಯೇ ||

**ಅರ್ಥ:**—ಸುವರ್ಣಮಯ ಪಾತ್ರದಿಂದ ಸತ್ಯದ ಮುಖ ಮುಚ್ಚಲ್ಪಟ್ಟಿದೆ. ಹೇ, ವಿಶ್ವ-ಪೋಷಕನಾದ ಪ್ರಭೋ! ನಾನು ಸತ್ಯ ಧರ್ಮದ ಉಪಾಸಕ, ದರ್ಶನಕ್ಕಾಗಿ ನನಗೆ ಅದನ್ನು ತೆಗೆ.

## ಟಿಪ್ಪಣಿ

(೧೩೯) ಆತ್ಮ ಸತ್ಯಕಾಮ, ಸತ್ಯಸಂಕಲ್ಪ, ಅದು ಸತ್ಯಸ್ವರೂಪ, ಶಿವಸ್ವರೂಪ. ಎಲ್ಲರಿಗೂ ಆ ಅನುಭವ ಏಕಾಗುವುದಿಲ್ಲ? ಉಪನಿಷತ್ತುಗಳು ಹೀಗೆ ಉತ್ತರ ಹೇಳುತ್ತವೆ—"ತ ಇಮೇ ಸತ್ಯಾಃ ಕಾಮಾಃ ಅನೃತಾಪಿಧಾನಾಃ". ಆತ್ಮದ ಸತ್ಯಕಾಮತ್ವ ಅನೃತದಿಂದ ಮರೆಯಾಗಿದೆ. (ಛಾಂದೋಗ್ಯ ೮-೩-೧) ಈ ಹೊದಿಕೆಯನ್ನು ದೂರಮಾಡಲೆಂದೇ ಈ ಪ್ರಾರ್ಥನೆ.

(೧೪೦) ಅನೃತಕ್ಕೆ ತನ್ನ ನಗ್ನಸ್ವರೂಪದಿಂದಲೆ ಮನುಷ್ಯನನ್ನು ತಟ್ಟನೆ ಆಕರ್ಷಿಸಲು ಸಾಧ್ಯವಾಗದು. ಅದು ಅನೇಕ 'ರಮಣೀಯ' ಭೋಗಗಳ, ಆಯಾ ಪ್ರಸಂಗದಲ್ಲಿ 'ಹಿತ'ರೂಪ ಎನಿಸುವ ಕರ್ತವ್ಯಗಳ, ರೂಪಧಾರಣೆ ಮಾಡುತ್ತಿರುತ್ತದೆ. ಇದೇ ಹಿರಣ್ಮಯ ಪಾತ್ರ, ಸುವರ್ಣದ ಹೊದಿಕೆ.

ಹಿರಣ್ಮಯ=ಹಿತ+ರಮಣೀಯ.

(೧೪೧) 'ಹಿರಣ್ಮಯ' ಶಬ್ದ ಲಾಕ್ಷಣಿಕವೆಂದು ಎದ್ದುಕಾಣುತ್ತದೆ. ಅಕ್ಷರಾರ್ಥವನ್ನು ನೋಡಿದರೆ, ಅದು ವಿತ್ತಮೋಹವನ್ನು ಸೂಚಿಸುವಂಥದಾಗಿ ಕಾಣುತ್ತದೆ. ಆ ಅರ್ಥವನ್ನು ಮರೆಯಬೇಕಾದುದಿಲ್ಲ. (ಮಂತ್ರ ೧ನ್ನು ನೋಡಿ) ವಿತ್ತ-ಮೋಹದಿಂದ ಮನುಷ್ಯನಿಗೆ ಸತ್ಯದರ್ಶನ ಲೋಪವಾಗಿ ಅವನು ಪ್ರಮಾದದಲ್ಲಿ ಬೀಳುತ್ತಾನೆ.

'ಪ್ರಮಾದ್ಯಂತಂ ವಿತ್ತಮೋಹೇನ ಮೂಢಂ'—ಕಠ ೨-೬.

(೧೪೨) ವಿತ್ತಮೋಹ ಮನುಷ್ಯನಿಗೆ ಏಕೆ ಬರುತ್ತದೆ? ವಿತ್ತದಿಂದ (ಧನದಿಂದ) ಪೋಷಣೆ ಎಂದಷ್ಟೆ. ಆದರೆ ಪೋಷಣೆ ಮಾಡುವ ತತ್ವವೇ ಬೇರೆ. ಅದನ್ನು ಸೂಚಿಸಲು 'ಪೂಷನ್' ಶಬ್ದದ ಯೋಜನೆ ಇಲ್ಲಿದೆ.

(೧೪೩) "ಹಿರಣ್ಮಯ ಪಾತ್ರ" ಗೀತೆಯ ಮಾತಿನಲ್ಲಿ "ಯೋಗ-ಮಾಯೆ." ಯೋಗಮಾಯೆಯಿಂದ ಈಶ್ವರ ಸಮಾವೃತನಾಗಿರುವುದರಿಂದ ಆತನ ದರ್ಶನ ಲುಪ್ತವಾಗಿದೆ (ಗೀ. ೭-೨೫). ಆತನ ಮಾಯೆಯ ನಿರಾಸ ಆತನ ಆಶ್ರಯದಿಂದಲೇ ಆಗಬೇಕು. ಅದಕ್ಕೆ ಈ ಪ್ರಾರ್ಥನೆ.

(೧೪೪) ಸತ್ಯದ ಮೇಲಿನ ಒಂಗಾರದ ಹೊದಿಕೆಯನ್ನು ದೂರಮಾಡ ಲೆಂದು ಇಲ್ಲಿ ವಿಶ್ವಪೋಷಕನಾದ ಪರಮೇಶ್ವರನ ಪ್ರಾರ್ಥನೆ ಮಾಡಿದೆ. ಈ ಪರಮೇಶ್ವರ ಸತ್ಯವಲ್ಲದೆ ಮತ್ತಾರು? ಅವನು ಸತ್ಯದಿಂದ ಬೇರೆಯಲ್ಲ. ಸತ್ಯವೇ ಆತ. ಸತ್ಯದ ದರ್ಶನವಾಗಲೆಂದೇ ಸತ್ಯಕ್ಕೆ ಈ ಪ್ರಾರ್ಥನೆ.

'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' (ತೈತ್ತಿರೀಯ ೨-೧)

(೧೪೫) ಈಶ್ವರ ಸತ್ಯ ಎನ್ನಬೇಕೆ, ಸತ್ಯವೆ ಈಶ್ವರ ಎನ್ನಬೇಕೆ? ಎರಡೂ ಒಂದೇ. ಒಂದು ತತ್ವಜ್ಞಾನದ ಭಾಷೆ, ಮತ್ತೊಂದು ಸಾಧನೆಯ ಭಾಷೆ.

(೧೪೬) ಈಶ್ವರನ ಗುಣ ಅನಂತ. ಸಾಧಕರು ತಂತಮ್ಮ ಇಚ್ಛಾನುಸಾರ ತಮಗೆ ಬೇಕಾಗುವ ಪ್ರಮಾಣದಲ್ಲಿ ಆತನನ್ನು ವಿಶಿಷ್ಟ-ಗುಣ-ರೂಪಿಯೆಂದು ತಿಳಿಯುತ್ತಾರೆ. ಇಂಥ ಸಾಧಕ-ಶಾಖೆಗಳನ್ನೂ ಸ್ಥೂಲವಾಗಿ ಎರಡು ವರ್ಗ ಮಾಡಲು ಸಾಧ್ಯ. ಒಂದು ನಿರ್ಗುಣಶಾಖೆ: ಈಶ್ವರನನ್ನು ಸತ್ಯ ಅಥವಾ ಸತ್ಯ-ಪರ್ಯಾಯ-ರೂಪ ನಾಮದಿಂದ ಸಂಬೋಧಿಸುವವರು. ಎರಡನೆಯದು ಸಗುಣಶಾಖೆ: ಇವರಿಗೆ ಪ್ರೇಮ, ಪ್ರೇಮಪರ್ಯಾಯ ರೂಪವಾದ ಸಂಜ್ಞೆ ಸಿಹಿ ಎನಿಸುತ್ತದೆ. ದಾರ್ಶನಿಕ ವೃತ್ತಿಯ ವಿಚಾರಕರು ಮೊದಲನೆ ಗುಂಪಿಗೆ ಸೇರುತ್ತಾರೆ. ಉಪಾಸನೆಯ ಪಂಥಿಗಳು ಎರಡನೆಯ ವರ್ಗ. ಉಪನಿಷತ್ತುಗಳು ದಾರ್ಶನಿಕವಾದುದರಿಂದ, ಅವುಗಳ ವ್ಯಾಖ್ಯಾನದಲ್ಲಿ 'ಸತ್ಯಂ ಬ್ರಹ್ಮ' ಎಂದು ಬರುತ್ತದೆ. ಆದರೆ ಉಪಾಸನೆಯಿಲ್ಲದೆ ದರ್ಶನವಿಲ್ಲವೆಂಬುದೂ ಉಪನಿಷತ್ತುಗಳ ಸಿದ್ಧಾಂತ. ಆದುದರಿಂದ ಉಪಾಸನೆಗಾಗಿ 'ಪ್ರಿಯಂ ಬ್ರಹ್ಮ' ಎಂದರೆ ಪ್ರೇಮಸ್ವರೂಪದ ಉಪಾಸನೆ ಮಾಡಬೇಕು. ಹೀಗೆಂದೂ ಅವು ನಿರ್ದೇಶ ಮಾಡಿವೆ. (ಬೃಹದಾರಣ್ಯಕ ೪-೧-೩, ಹಾಗೇ ೧-೪-೮). ತಾತ್ತ್ವಿಕ ವಿಚಾರ ಮಾಡಿದರೆ ಕಡೆಗೆ 'ಸತ್ಯ' ಶಬ್ದವೇ ನಿಲ್ಲುತ್ತದೆ. ಕಾರಣ—ಸತ್ಯ ನಿರ್ವಿಕಾರ; ಪ್ರೇಮ ವಿಕಾರಸಹಿತವೂ ನಿರ್ವಿಕಾರವೂ ಆಗಿರಬಲ್ಲುದು. ಆದುದರಿಂದಲೇ ವಿಕಾರವಂತ ಮನುಷ್ಯನನ್ನು ನಿರ್ವಿಕಾರತೆಯ ಕಡೆಗೆ ಒಯ್ಯಲು, ಈಶ್ವರನ ಪ್ರೇಮಮಯ ಸ್ವರೂಪ ಹೂವಿನಂತೆ ಉಪಯುಕ್ತವಾಗುತ್ತದೆ. ಆ ಪ್ರಕಾರ ಅದರ ಉಪಯೋಗವನ್ನು ಯಾಜ್ಞವಲ್ಕ್ಯ-ಮೈತ್ರೇಯಿಯ ಸಂವಾದ ಸೂಚಿಸುತ್ತದೆ. ವ್ಯಾಪಕ ದೃಷ್ಟಿಯಿಂದ ಸತ್ಯ ಸಾಧ್ಯ; ಪ್ರೇಮ ಅದರ ಪ್ರಾಪ್ತಿಗೆ ಸಾಧನ ಎಂಬುದೇ ಇದರ ನಿಷ್ಕೃಷ್ಟಾರ್ಥ.

(೧೪೭) ಸತ್ಯರೂಪಿಯಾದ ಪರಮೇಶ್ವರನನ್ನು 'ಪೂಷನ್' ಎಂದರೆ 'ವಿಶ್ವಪೋಷಕ' ಎಂದಿದೆ. ಕಾರಣ—ಸತ್ಯದಿಂದ ಪೋಷಣೆಯಾಗುತ್ತದೆ, ಅನೃತದಿಂದ ಶೋಷಣವಾಗುತ್ತದೆ.

"ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿವದತಿ"

—ಪ್ರಶ್ನೋಪನಿಷತ್ ೬-೧

(೧೪೮) ಸತ್ಯವನ್ನು 'ಪೂಷನ್' ಎಂದರೆ 'ವಿಶ್ವ-ಪೋಷಕ' ಎಂದು

ಹೆಸರಿಟ್ಟು ಪ್ರಸ್ತುತ ಮಂತ್ರದಲ್ಲಿ ಸತ್ಯ–ಪ್ರೇಮಗಳಲ್ಲಿನ ಭೇದವನ್ನೇ ಕಡಿಮೆಮಾಡಿದೆ. ಸರ್ವ ಸಮಾಜದಲ್ಲಿಯೂ ಪ್ರೇಮಮಯ ಪರಿಚರ್ಯ ವೃತ್ತಿಯನ್ನು ಪೋಷಿಸುವ ಶೂದ್ರನನ್ನು ಉಪನಿಷತ್ತುಗಳು 'ಪೂಷನ್' ಎಂದಿವೆ. ಇಂಥಾ ಪ್ರೇಮನೇವಾವೃತ್ತಿಯ ಆದರ್ಶ ಎಂದೇ 'ಭೂದೇವಿ' ಯ ಉದಾಹರಣೆಯನ್ನು ಮುಂದಿಟ್ಟು ಆಕೆಯನ್ನೂ 'ಪೂಷನ್' ಎಂದು ಕರೆದಿದೆ. "ಇಯಂ ವೈ ಪೂಷಾ. ಇಯಂ ಹೀದಂ ಪುಷ್ಯತಿ ಯದಿದಂ ಕಿಂಚ" (ಬೃಹ. ೧-೪-೧೩). 'ಪೂಷನ್' ಶಬ್ದದ ವಿವರಣೆ ಮುಂದಿನ ಮಂತ್ರದಲ್ಲಿ ಹೆಚ್ಚಾಗಿ ಬರುತ್ತದೆ. ಸತ್ಯ, ಪ್ರೇಮ ಇವೆರಡನ್ನೂ ಸಮನ್ವಯಮಾಡುವ ಈ ವೃತ್ತಿಗಾಗಿಯೇ ೬ನೆ ಮತ್ತು ೭ನೆ ಮಂತ್ರಗಳನ್ನು ಬೇರೆ ಬೇರೆಯಾಗಿ ಹೇಳಬೇಕಾಗಿದೆ ಹಾಗಿಲ್ಲದಿದ್ದರೆ ಅವೆರಡರಲ್ಲಿ ಯಾವುದಾದರೂ ಒಂದು ಮಾತ್ರವೇ ಸಾಕಾಗುತ್ತಿತ್ತು.

(೧೪೯) "ತತ್ ತ್ವಂ ಅಪಾವೃಣು" ಎಂದರೆ ಆ ಮರೆಯನ್ನು ನೀನು ದೂರ ಮಾಡು ಅಥವಾ ಆ (ಸತ್ಯದ ಮುಖವನ್ನು) ಪ್ರಕಟಪಡಿಸು. ಹೀಗೆ ಎರಡು ರೀತಿ ರಚನೆ ಮಾಡಬಹುದು. ಫಲಿತವೊಂದೇ.

(೧೫೦) "ಸತ್ಯ–ಧರ್ಮ" ಈ ಶಬ್ದ ತನ್ನ ಹಿಂದಿನ ಸ್ವರೂಪದಲ್ಲಿ (ಸತ್ಯ–ಧರ್ಮನ್) ಋಗ್ವೇದದಲ್ಲಿ ನಾಲ್ಕೈದು ಸಲ ಉಲ್ಲಿಖಿತವಾಗಿ, ಅಲ್ಲೆಲ್ಲಾ ಬಹುವ್ರೀಹಿಯಾಗಿಯೇ ಬಂದಿದೆ ಆದುದರಿಂದ "ಸತ್ಯದ ಉಪಾಸನೆ ಯಾವನ ಧರ್ಮವೋ ಅಂಥವನು" ಎಂದು ಅರ್ಥ ಮಾಡಬೇಕಾಗುತ್ತದೆ.

(೧೫೧) ಧರ್ಮವೆಂದರೆ ಧಾರಣಮಾಡುವಂಥಾದ್ದು. ಈ ಅರ್ಥದಲ್ಲಿ ಆ ಶಬ್ದ ಹೇಗೆ ನೀತಿ-ಧರ್ಮದ ವಾಚಕವಾಗುತ್ತದೆಯೋ ಹಾಗೆಯೆ ಈಶ್ವರ ವಾಚಕವೂ ಆಗುತ್ತದೆ

"ಏಷ ಸರ್ವೇಶ್ವರಃ, ಏಷ ಸೇತುರ್ವಿಧರಣಃ
ಏಷಾಂ ಲೋಕಾನಾಂ ಅಸಂಭೇದಾಯ"—

"ಈ ಸರ್ವೇಶ್ವರ, ಲೋಕವನ್ನು ಭೇದಿಸಿ ಹೋಗದಿರಲೆಂದೇ ಆತನನ್ನು ಆವರಿಸಿ ಹಿಡಿದಿರುವ ಈ ಬಂಧ"—(ಬೃಹ. ೪-೪-೨೨).

ಧರ್ಮಶಬ್ದದ ನೀತಿಧರ್ಮ, ಈಶ್ವರ—ಎಂಬ ಈ ಎರಡರ್ಥಗಳನ್ನು ಗಮನದಲ್ಲಿಟ್ಟು ಸತ್ಯ-ಧರ್ಮ ಶಬ್ದದ ಎರಡರ್ಥಗಳನ್ನು ತಿಳಿಯಬೇಕು.

(೧೫೨) ಸತ್ಯದಲ್ಲಿ ನೀತಿಧರ್ಮದ ಸಮಸ್ತಸಾರ ಅಡಗಿದೆ. ಏಕೆಂದರೆ, –ಸತ್ಯವೇ ನೀತಿಧರ್ಮದ ಆಧಾರ. ಅಲ್ಲದೆ ಅದು ಸ್ವತಂತ್ರಧರ್ಮವೂ ಹೌದು. ಅದು ಮೊದಲನೆಯದು; ಕೊನೆಯದು; ಪರಮ; ಪೂರ್ಣ. ಸತ್ಯಕ್ಕೆ ವಿರುದ್ಧವಾಗಿ ಯಾವುದು ಮುಂದೆ ನಿಂತರೂ, ಅದೆಲ್ಲವೂ ಸಹಜವಾಗಿಯೇ ಸುಳ್ಳಾಗಿ ಕುಸಿದು ಬೀಳುತ್ತದೆ.

"ಯೋ ವೈ ಸ ಧರ್ಮಃ ಸತ್ಯಂ ವೈ ತತ್". (ಬೃ. ೧-೪-೧೪)

(೧೫೩) ಸತ್ಯ: ದರ್ಶನಕ್ಕಾಗಿ ಆತ್ಮವಾಗುತ್ತದೆ
ಪ್ರಾರ್ಥನೆಗಾಗಿ ಈಶ್ವರನಾಗುತ್ತದೆ.
ಆಚರಣಾರ್ಥವಾಗಿ ಧರ್ಮವಾಗುತ್ತದೆ.

(೧೫೪) ಈ ಮಂತ್ರದಲ್ಲಿನ ಪ್ರಾರ್ಥನೆಯೇ ವೈದಿಕ ಧರ್ಮದ ಸಾರ್ವಭೌಮ ಪ್ರಾರ್ಥನೆ. ಇಲ್ಲಿಂದಲೆ ಮುಂದಿನ ಮೂರು ಮಂತ್ರಗಳ ಧ್ಯಾನತ್ರಯಿಯನ್ನು ಸಂಪಾದಿಸಬೇಕು.

## ೧೬

ಮಂತ್ರ:—ಪೂಷನ್ ಏಕ-ಋಷೇ ಯಮಸೂರ್ಯ
ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ ।
ತೇಜೋ ಯತ್ತೇ ರೂಪಂ ಕಲ್ಯಾಣತಮಂ
ತತ್ತೇ ಪಶ್ಯಾಮಿ
ಯೋಽಸಾವಾಸೌ ಪುರುಷಃ ಸೋಽಹಮಸ್ಮಿ ॥ ೧೬ ॥

ಪದಪಾಠ:— ಪೂಷನ್, ಏಕ-ಋಷೇ, ಯಮ, ಸೂರ್ಯ, ಪ್ರಾಜಾಪತ್ಯ, ವ್ಯೂಹ, ರಶ್ಮೀನ್, ಸಮೂಹ। ತೇಜಃ, ಯತ್, ತೇ, ಕಲ್ಯಾಣತಮಂ, ತತ್, ತೇ, ಪಶ್ಯಾಮಿ, ಯಃ, ಅಸೌ, ಅಸೌ, ಪುರುಷಃ, ಸಃ, ಅಹಂ, ಅಸ್ಮಿ ॥

ಅರ್ಥ:—ನೀನೇ ಈ ವಿಶ್ವದ ಪೋಷಣಕರ್ತ, ನೀನೊಬ್ಬನೆ ನಿರೀಕ್ಷಣೆ ಮಾಡುವವನು. ನೀನೇ ನಿಯಮನ ಮಾಡುವವನು. ಉತ್ತಮ ಪ್ರವರ್ತಕನೂ ನೀನೇ. ನೀನೇ ಸರ್ವರನ್ನು ಪ್ರಜೆಗಳಂತೆ ಪಾಲನೆಮಾಡತಕ್ಕವನು. ನಿನ್ನ ಈ (ಪೋಷಣಾದಿ) ರಶ್ಮಿಯನ್ನು ತೆರೆದು, ಒಟ್ಟುಗೂಡಿಸಿ ತೋರಿಸು. ನಿನ್ನ ತೇಜಸ್ವಿಯಾದ ಪರಮ ಕಲ್ಯಾಣಮಯ ರೂಪವನ್ನು ನಾನು (ಈಗ) ನೋಡುತ್ತಿದೇನೆ. ಆ ಪರಾತ್ಪರ ಪುರುಷ ನಾನೇ.

## ಟಿಪ್ಪಣಿ

(೧೫೫) ಇಲ್ಲಿ ಸೂರ್ಯನ ಪ್ರತೀಕದಲ್ಲಿ ಈಶ್ವರನ ಧ್ಯಾನ ಮಾಡಬೇಕು. ಯಾವ ಅಂತರ್ಯಾಮಿ ಸೂರ್ಯನ ಪ್ರೇರಕನೋ, ಅದುವೇ ನನ್ನ ಬುದ್ಧಿಯ ಪ್ರೇರಕ. ಅದರ ಹೆಸರು 'ಸತ್ಯ'. ಸೂರ್ಯ, ಬುದ್ಧಿ ಎರಡೂ ಮರೆಗಳೆಂದು ತಿಳಿಯಬೇಕು.

(೧೫೬) ಮಂತ್ರದ ಮೊದಲ ಎರಡು ಚರಣಗಳಲ್ಲಿ ಪ್ರಾರ್ಥನೆ ಮುಗಿದಿದೆ. 'ರಶ್ಮೀನ್ ವ್ಯೂಹ, ರಶ್ಮೀನ್ ಸಮೂಹ' ಹೀಗೆ ಪ್ರಾರ್ಥನೆಯ ಎರಡು ವಾಕ್ಯ. ಅದಾದನಂತರ ಭಕ್ತನ ಪ್ರಾರ್ಥನೆಯನ್ನು ಕೇಳಿ, ಈಶ್ವರ ಅವನಿಗೆ ದರ್ಶನವಿತ್ತನೆಂದು ತಿಳಿಯತಕ್ಕದ್ದು. ಮೂರನೆಯ ಚರಣದಲ್ಲಿ ಈ ದರ್ಶನವನ್ನು ವರ್ಣಿಸಿದೆ. 'ತೇಜಃ'—ಇದು 'ರೂಪಮ್' ಶಬ್ದದ ವಿಶೇಷಣದಂತೆ ಸಮಾನಾಧಿಕರಣದಲ್ಲಿದೆ. ನಾಲ್ಕನೆಯ ಚರಣದಲ್ಲಿ ದರ್ಶನದಿಂದಾದ ಪ್ರತೀತಿಯನ್ನು ತೋರಿಸಿದೆ.

(೧೫೭) ಈ ಮಂತ್ರದಲ್ಲಿ ಪರಿಪೂರ್ಣ ಧ್ಯಾನವನ್ನು ಮಾಡಿಸಿದೆ. ಪ್ರಾರ್ಥನೆ, ದರ್ಶನ, ಪ್ರತೀತಿ ಸೇರಿ ಧ್ಯಾನ ಪೂರ್ಣವಾಗುತ್ತದೆ. ದರ್ಶನವಾಗದ ಪರ್ಯಂತ, ದರ್ಶನಕ್ಕೆ ಬದಲು ಭಾವನೆಯಿಂದ, ಪ್ರತೀತಿಗೆ ಬದಲು ಪ್ರೀತಿಯಿಂದ ಧ್ಯಾನವನ್ನು ಪೂರ್ಣಗೊಳಿಸಬೇಕಾಗುತ್ತದೆ.

(೧೫೮) 'ಏಕ ಋಷಿ'–'ಋಷ್' ಎಂದರೆ ನಿರೀಕ್ಷಣೆ ಮಾಡುವುದು. ಈ ಧಾತುವಿನಿಂದ 'ಋಷಿ' ಶಬ್ದವಾಗಿದೆ ಹೀಗೆ ನಿರೀಕ್ಷಣೆ ಮಾಡುವ ಅಂತರ್ಯಾಮಿ ಭಗವಂತನೊಬ್ಬನೇ. ಅದಕ್ಕಾಗಿಯೆ ಆತನನ್ನು 'ಏಕ ಋಷಿ' ಎನ್ನಬೇಕು. 'ನಿರೀಕ್ಷಣೆ' ಈಶ್ವರೀಯ ಸತ್ತೆಯ ಒಂದು ದೊಡ್ಡ ಅಂಗ. ಇಂಥ ನಿರೀಕ್ಷಣೆಯ ಅಧಿಕಾರ ಈಶ್ವರನಿಗೇ ಸಲ್ಲುವದು. ಶಿಷ್ಯನಿಗೆ ಗುರು ಈಶ್ವರ–ಸಮಾನನಾದುದರಿಂದ ಗುರುವಿಗೂ ಆ ಅಧಿಕಾರ ಸಲ್ಲುವುದೆಂದು ಗಣಿಸಲ್ಪಟ್ಟಿದೆ. ಹೀಗೆಂದೇ ಗುರುವಿಗೂ 'ಏಕ ಋಷಿ' ಎಂದು ಸಂಜ್ಞೆ. ಉಪಾಸನೆಗೆಂದು ಈಶ್ವರನಿಗೆ ಆಕಾಶದಲ್ಲಿರುವ ಸೂರ್ಯನ ಉಪಮೆ, ಗುರುವಿಗೆ ಪೃಥ್ವಿಯಲ್ಲಿರುವ ಅಗ್ನಿಯ ಉಪಮೆ ಕೊಟ್ಟು, 'ಏಕ ಋಷಿ' ಎಂಬುದಕ್ಕೆ ಸೂರ್ಯ ಮತ್ತು

ಅಗ್ನಿ ಎಂದು ಅರ್ಥಮಾಡಲು ಆಗುತ್ತದೆ. ಪ್ರಸ್ತುತ ಮಂತ್ರದಲ್ಲಿ ಸೂರ್ಯನ ಕಡೆಗೂ, ಮುಂಡಕ (ಉಪನಿಷತ್)ದಲ್ಲಿ ಅಗ್ನಿಯ ಕಡೆಗೂ ಲಕ್ಷ್ಯವಿದೆ. ಸಂಸ್ಕೃತದಲ್ಲಿ ಯಾವ ಧಾತುವಿಗಾದರೂ ಸೂಕ್ಷ್ಮ ಅರ್ಥದಲ್ಲಿ ಜ್ಞಾನಾರ್ಥವಾಗಿದ್ದರೆ, ಸ್ಥೂಲಾರ್ಥದಲ್ಲಿ ಅವುಗಳಿಗೆ ಗತ್ಯರ್ಥವಿರುತ್ತದೆ. ಆ ನಿಯಮದಂತೆ 'ಋಷ್' ಎಂದರೆ ಹೋಗುವುದು ಎಂದೂ ಅರ್ಥವಾಗುತ್ತದೆ. ಈ ಎರಡೂ ಅರ್ಥಗಳನ್ನೂ ಒಂದೆಡೆ ಕೂಡಿಸಿ, ಅದನ್ನು ೪ನೆ ಮಂತ್ರದ ಮಧ್ಯೆ 'ಅರ್ಷತ್' ಪದದಲ್ಲಿ ಬಳಸಿದೆ.

(೧೫೯) 'ಯಮ-ಸೂರ್ಯ' ಇವೆರಡೂ ಪರಸ್ಪರ ಪೂರಕವಾದ ಜೋಡಿ ಕಾರ್ಯಗಳು. ಈಶ್ವರ ಭಕ್ತನ ನಿರೀಕ್ಷಣೆ ಮಾಡುತ್ತಾ ನಿಲ್ಲುವುದಿಲ್ಲ. ಆವಶ್ಯಕವೆನಿಸಿದಷ್ಟು ಅವನನ್ನು ನಿಯಮನ ಮಾಡುತ್ತಾನೆ. ಆತನಿಗೆ ಪ್ರೇರಣೆ ಕೊಡುತ್ತಾನೆ. ಕೆಟ್ಟದ್ದರಲ್ಲಿ ನಿಯಮನ, ಒಳ್ಳೆಯ ವಿಷಯದಲ್ಲಿ ಪ್ರೇರಣೆ. 'ಯಮ' ಎಂದರೆ 'ನಿಯಮನ ಮಾಡುವವನು.' 'ಸೂರ್ಯ' ಎಂದರೆ ಉತ್ತಮ ರೀತಿಯಲ್ಲಿ ಪ್ರೇರಣೆಕೊಡುವವನು (ಸು+ಈರ). ಸೂರ್ಯನೇ ಸೂಕ್ಷ್ಮರೂಪದಲ್ಲಿ 'ಸವಿತಾ' ಎನಿಸಿಕೊಳ್ಳುತ್ತಾನೆ. ಗಾಯತ್ರೀ ಮಂತ್ರದಲ್ಲಿ ಇದರ ವರಣೀಯ ಸ್ವರೂಪದ ಧ್ಯಾನಮಾಡಿ, ಅದರಿಂದ ಬುದ್ಧಿಗೆ ಉತ್ತಮ ಪ್ರೇರಣೆಯನ್ನು ಅಪೇಕ್ಷಿಸಿದೆ.

(೧೬೦) 'ಪ್ರಾಜಾಪತ್ಯ' ಶಬ್ದವನ್ನು 'ರಾಜ್ಯ' ಶಬ್ದಕ್ಕೆ ಪ್ರತಿಕಕ್ಷಿಯಾಗಿ ಮುಂದಿಟ್ಟಿದೆ. ಅದು ಈಶ್ವರೀಯ ರಾಜ್ಯದ ಸ್ವರೂಪವನ್ನು ತೋರಿಸುತ್ತದೆ. ಅರ್ಥಾತ್ ಅದು ಧರ್ಮವಾಚಕ ಶಬ್ದ. ಅದನ್ನೇ ಇಲ್ಲಿ ಧರ್ಮಿಗೂ ಹಚ್ಚಿದೆ.

(೧೬೧) "ವ್ಯೂಹ, ಸಮೂಹ" ಅಥವಾ ವಿಶ್ಲೇಷಣ, ಸಂಶ್ಲೇಷಣ-ಎರಡೂ ಸೇರಿಯೆ ಯಾವುದಾದರೂ ಒಂದು ವಸ್ತುವಿನ ದರ್ಶನ ಪೂರ್ಣವಾಗುತ್ತದೆ. ಆದರೆ ಭೌತಿಕ ಚಿಂತನೆಯಲ್ಲಿ ಅವುಗಳಲ್ಲೇ ವಿಶ್ಲೇಷಣ ಪ್ರಧಾನವಾಗುತ್ತದೆ, ಆಧ್ಯಾತ್ಮಿಕ ಚಿಂತನದಲ್ಲಿ ಸಂಶ್ಲೇಷಣ ಪ್ರಧಾನವಾಗುತ್ತದೆ. (೭೦ನೇ ಟಿ. ನೋಡಿ.)

(೧೬೨) "ಪೋಷಣೆ + ನಿರೀಕ್ಷಣೆ + ನಿಯಮನ + ಪ್ರವರ್ತನೆ + ಪಾಲನೆ" ಇದು ಈಶತತ್ವದ ವಿಶ್ಲೇಷಣ. ಅದರ ಸಂಶ್ಲೇಷಣ "ಪರಮ ಕಲ್ಯಾಣ."

(೧೬೩) "ತತ್ ತೇ ಪಶ್ಯಾಮಿ". ಈ ವಾಕ್ಯ ನಿಜವಾಗಿ ವೃತ್ತದ ಹೊರಗಣದು. ಎಂದರೆ ಅದನ್ನು ಬಹಳ ಮೆಲ್ಲನೆ ಉಸಿರಿನ ಮಧ್ಯದಲ್ಲೇ ಹೇಳತಕ್ಕದ್ದು.

(೧೬೪) ಈಶ್ವರ 'ಅಶಬ್ದವಮ್, ಅಸ್ಪರ್ಶವಮ್, ಅರೂಪಂ' (ಕಠ. ೧-೩-೧೫). ಈ ಪ್ರಕಾರವಾಗಿ ಕೇವಲ ಅವ್ಯಕ್ತನೆಂದು ಹೇಳಲ್ಪಟ್ಟಿದೆ. ಆತನ ರೂಪ ದರ್ಶನವಾಗುವುದು ಹೇಗೆ? ಇಂಥ ಪ್ರಶ್ನೆ ಇಲ್ಲಿ ಬರಲು ಅವಕಾಶವಿದೆ. ಅದನ್ನೇ ತೆಗೆದುಕೊಂಡು ಬ್ರಹ್ಮಸೂತ್ರಗಳು ಅದಕ್ಕೆ ಹೀಗೆ ಉತ್ತರವಿತ್ತಿವೆ—"ಅಪಿಚ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ" (ಬ್ರಹ್ಮಸೂತ್ರ ೩-೨-೨೪) ಸೂತ್ರದ ಒಂದರ್ಥ ಹೀಗೆ—ಧ್ಯಾನಾವಸ್ಥೆಯ ನಡುವೆ ಅವ್ಯಕ್ತ ಈಶ್ವರನ ದರ್ಶನ ಸಾಧ್ಯವೆಂದು ಶ್ರುತಿ ಸ್ಮೃತಿಗಳ ನಿರ್ಣಯ. ಸೂತ್ರದ ಎರಡನೆಯ ಅರ್ಥ—"ಈಶ್ವರೀ ಶಬ್ದವನ್ನು ಕೇಳುವುದು, ಈಶ್ವರನ ರೂಪವನ್ನು ನೋಡುವುದು, ಈಶ್ವರೀಯ ಸ್ಪರ್ಶಾನುಭವ ಪಡೆಯುವುದು ಮುಂತಾದ ಸಗುಣ ಸಾಕ್ಷಾತ್ಕಾರವನ್ನು ಅನೇಕ ಭಕ್ತರು ತನ್ಮಯಾವಸ್ಥೆಯಲ್ಲಿ ಪ್ರತ್ಯಕ್ಷವಾಗಿ ಅನುಭವಿಸಿರುವರಾಗಿ, (ನೈತರ್ಕಿಕ) ಅನುಮಾನಕ್ಕೆ ಅದು ಸಿಗುವಂಥದು." ನೈತರ್ಕಿಕ ಅನುಮಾನದ ಕಿಂಚಿತ್ ದಿಗ್ದರ್ಶನವನ್ನು ೫೫ನೇ ಟಿಪ್ಪಣಿಯ ಮಧ್ಯೆ ಮಾಡಿದೆ.

(೧೬೫) "ಯೋಽಸಾವಸೌ ಪುರುಷಃ ಸೋಽಹಮಸ್ಮಿ" ಇಲ್ಲಿ ಎರಡನೆಯ ಅಸೌ ಶಬ್ದ ಅವತರಣಾಂಕಿತವಾದುದು. ಯಾವ ಪುರುಷ 'ಅಸೌ' ಅನಿಸಿಕೊಂಡಿದಾನೆಯೋ, ಅವನೇ ನಾನು ಎಂಬರ್ಥ ಈ ವಾಕ್ಯದಿಂದಾಗುತ್ತದೆ. 'ಅಸೌ ಪುರುಷ'ನೆಂದರೆ ಬಹಳ ದೂರದಲ್ಲಿನ-ಪರಾತ್ಪರ ಪುರುಷ' ಎಂದರೆ ಪರಮೇಶ್ವರ. ಅತ್ತ ಕಡೆ ಯಾವ ಪುರುಷನಿದಾನೋ ಆತನೇ ಇತ್ತ ಕಡೆ ಇದಾನೆ. ನಾನೇ ಆತ.

(೧೬೬) 'ಪುರುಷ' ಶಬ್ದ ಆತ್ಮವಾಚಕವೆಂಬುದು ಪ್ರಸಿದ್ಧ. ಅದನ್ನು ಶ್ರುತಿ ಅನೇಕ ಪ್ರಕಾರವಾಗಿ ನಿರ್ವಚನಮಾಡಿದೆ.

೧. "ತೇನೈಷ ಪೂರ್ಣಃ" ತನ್ನ ಪೂರಕ ಶಕ್ತಿಯಿಂದ ದೇಹವನ್ನು ಪೂರ್ಣ ಮಾಡುತ್ತಾನೆ ಎಂದು ಪುರುಷನೆಂತಲೂ (ತೈತ್ತಿರೀಯ ೨-೫);

೨. "ಪೂರ್ವಮ್ ಓಷತ್" ದೇಹಕ್ಕಿಂತ ಮುಂಚೆ ಸುಟ್ಟನಾದುದರಿಂದ ಪುರುಷನೆಂತಲೂ (ಬೃಹ. ೧-೪-೧);

೩. 'ಪುರೀತತಿ ಶೇತೇ' (ಬೃಹ. ೨-೧-೧೯) ಅಥವಾ 'ಪುರಿ ಶೇತೇ' (ಬೃಹ. ೨-೫-೧೮) ಎಂದರೆ ದೇಹದ, ಹೃದಯ-ಗುಹೆಯಲ್ಲಿ ಮಲಗಿರುತ್ತಾನಾದುದರಿಂದ 'ಪುರುಷ'ನೆಂತಲೂ;

೪. 'ಪುರಃ ಆವಿಶತ್' (ಬೃಹ. ೨-೬-೧೮) ಎಂದರೆ ದೇಹದಲ್ಲಿ ಪ್ರವೇಶಮಾಡಿರುತ್ತಾನಾಗಿ 'ಪುರುಷ'ನೆಂತಲೂ; ಇದಲ್ಲದೆ,

೫. 'ಪೂರ್ವಮ್ ಅರ್ಷತ್ ಇತಿ ಪುರುಷಃ' ಎಂಬ ನಿರ್ವಚನ ಹಿಂದೆ ಬಂದೇ ಇದೆ. (ಟಿಪ್ಪಣಿ ೫೮).

ಈ ನಿರ್ವಚನಗಳೆಲ್ಲವೂ ಉತ್ತಮ ಭಾವವನ್ನು ತೋರಿಸುವಂಥವು. ಆದರೂ ಈ ಮಂತ್ರದಲ್ಲಿ 'ಪೂಷನ್ ಏಕ ಋಷೇ' ಇತ್ಯಾದಿ ಪದಗಳಿಂದ ಈಶ್ವರನ ಈಶ್ವರತ್ವದ ವ್ಯಾಖ್ಯಾನ ಮಾಡಲ್ಪಟ್ಟಿರುವುದರಿಂದ ತದನುಸಾರವಾಗಿ—

೬. 'ಪುರಃ ಈಷ್ಟೇ' ಎಂದರೆ ದೇಹದಮೇಲೆ ಪ್ರಭುತ್ವ ನಡಸುತ್ತಾನೆ ಎಂದು 'ಪುರುಷ', ಎಂಬ ನಿರ್ವಚನ ಇಲ್ಲಿ ಸೂಚಿತವಾಗುತ್ತದೆ; ಸೂಚಿಸಲ್ಪಡಬೇಕೆಂದು ನನಗನಿಸುತ್ತದೆ.

(೧೬೭) ವಿಶ್ಲೇಷಣದಿಂದ ಲಭಿಸಿದ ಪೋಷಣವೇ ಮುಂತಾದ ಪಂಚರಶ್ಮಿ ಈ ಚಿಂತನೆಯ ಪ್ರಥಮ ಭೂಮಿಕೆ. ಸಂಶ್ಲೇಷಣದಿಂದ ಲಭಿಸಿದ ಕಲ್ಯಾಣತಮ ತೇಜಸ್ಸು, ದರ್ಶನದ ಎರಡನೆಯ ಭೂಮಿಕೆ. ಅದರ ಅತ್ತಕಡೆ 'ಯೋಽಸೌ, ಅಸೌ ಪುರುಷಃ, ಸೋಽಹಮಸ್ಮಿ' ಇದು ಸಾಮರಸ್ಯದ ಮೂರನೆಯ ಭೂಮಿಕೆ.

(೧೬೮) 'ಸೋಽಹಂ' ಇದು ಜಪವೋ ಅಥವಾ ಅನುಭವವೋ? ಇಲ್ಲಿ ಅದನ್ನು ಅನುಭವವೆಂದು ಪ್ರತಿಪಾದಿಸಿದೆ. ಆದರೆ ಸಾಧಕರಿಗೆ ಅದೇ ಜಪವೂ ಆಗುತ್ತದೆ. ಈ ಜಪವನ್ನು ಪ್ರಾಣಾಯಾಮದ ಸಂಗಡ ಮಾಡಬೇಕು. ಒಂದು ರೀತಿಯಲ್ಲಿ ಶ್ವಾಸೋಚ್ಛ್ವಾಸದೊಂದಿಗೆ ಮಾಡಿದರೂ ಆಗುತ್ತದೆ ಯೋಗಶಾಸ್ತ್ರದಲ್ಲಿ ಇದರ ಪ್ರಕ್ರಿಯೆ ಸವಿಸ್ತರವಾಗಿ ಹೇಳಲ್ಪಟ್ಟಿದೆ. ಆತ್ಮಾನುಭವವಾದನಂತರ ಇದರ ಜಪ ಇಲ್ಲದಂತಾಗಿ ಅದಕ್ಕೆ ಅಖಂಡ ಜಪತ್ವ ಉಂಟಾಗುತ್ತದೆ. ಅದಕ್ಕೆ 'ಅಜಪಾ' ಎಂಬ ಹೆಸರು ಕೊಡಲ್ಪಟ್ಟಿದೆ.

*

(೧೭೯) ಸೋಽಹಂ ಶಬ್ದದಿಂದ ಯಾವ ಬಗೆಯ ಐಕ್ಯ ಸೂಚಿಸಲ್ಪಟ್ಟದೆ? ಪ್ರೇಮಾತಿಶಯ ರೂಪವೆ, ಅಂಗಾಂಗಿ ಭಾವರೂಪವೆ, ಅಂಶಾಂಶಿ ರೂಪವೆ, ಸಾಧರ್ಮ್ಯ ರೂಪವೆ, ತಾದಾತ್ಮ್ಯ ರೂಪವೆ? ಹೇಗೆ ಭಾವಿಸಿದರೆ ಹಾಗೆ ಆದೀತು. ಅನುಭವದಿಂದಲೇ ತಿಳಿಯತಕ್ಕದ್ದು. ಶಬ್ದಕ್ಕೆ ಸಿಲುಕದ ವಸ್ತುವನ್ನು ಶಬ್ದದಲ್ಲಿ ನಿರೂಪಿಸುವ ಯತ್ನಮಾಡಿದರೆ ವಾದ ಬೆಳೆದೀತೇ ವಿನಾ ಬೋಧೆ ಉಂಟಾಗಲಾರದು.

(೧೮೦) 'ಅಸೌ ಪುರುಷ' ಎಂದರೆ ಪ್ರತೀಕತ್ವ ದೃಷ್ಟಿಯಿಂದ 'ಆದಿತ್ಯ ಪುರುಷ' ನೆಂಬ ಅರ್ಥವೂ ಇದೆ. ಮಾಧ್ಯಂದಿನ ಪಾಠದಲ್ಲಿ ಆ ರೀತಿ ಗೃಹೀತವಾಗಿದೆ. ೧೫ನೆ ಮಂತ್ರದ ಪೂರ್ವಾರ್ಧವನ್ನೂ ಈ ಮಂತ್ರದ ಅಂತ್ಯಚರಣವನ್ನೂ ಸ್ವಲ್ಪ ಪಾಠಾಂತರದೊಡನೆ ತೆಗೆದುಕೊಂಡು ಮಾಧ್ಯಂದಿನದಲ್ಲಿ ಈ ರೀತಿ ಪಾಠ ರಚಿತವಾಗಿದೆ—

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ಯೋಽಸಾವಾದಿತ್ಯೇ ಪುರುಷಃ ಸೋಽಸಾವಹಂ ॥

ಈ ಮಂತ್ರ ಆದರ ಆನುಪೂರ್ವಿಯಲ್ಲಿ ಅಧ್ಯಾಯದ ಕಡೆಯಲ್ಲಿ ಹಾಕಲ್ಪಟ್ಟಿದೆ. ಈ ಪಾಠಾಂತರದಿಂದ 'ಅಸೌ ಪುರುಷಃ' ಶಬ್ದದ ಪ್ರತೀಕವನ್ನು ತೋರಿಸುವುದಕ್ಕಿಂತ ಅಧಿಕವಾಗಿ ಬೇರೆ ಏನನ್ನೂ ಸಾಧಿಸಿಲ್ಲ. ಇಲ್ಲಿಯೂ ಕೂಡ 'ಆದಿತ್ಯ' ಶಬ್ದದಿಂದ ಪರಮೇಶ್ವರನೇ ಲಕ್ಷ್ಯ ಎಂಬುದು ಬೃಹದಾರಣ್ಯಕದಲ್ಲಿ ಬರುವ ಈ ಕೆಳಗಿನ ಪ್ರವಚನದಿಂದ ಮನದಟ್ಟಾದೀತು.

"ಯಂ ಆದಿತ್ಯೇತಿಷ್ಠನ್, ಆದಿತ್ಯಾತ್ ಅಂತರಃ, ಯಂ ಆದಿತ್ಯಃ ನ ವೇದ, ಯಸ್ಯ ಆದಿತ್ಯಃ ಶರೀರಂ, ಯಃ ಆದಿತ್ಯಂ ಅಂತರಃ ಯಮಯತಿ, ಏಷತೇ ಆತ್ಮಾ ಅಂತರ್ಯಾಮಿ ಅಮೃತಃ" (ಬೃ ೩-೭-೯).

(೧೮೧) ಸೋಽಹಂ ಸಿದ್ಧಿಯನಂತರ ಸಹಜವಾಗಿಯೇ ಮುಕ್ತಿಯ ಅಪೇಕ್ಷೆಯಾಗುತ್ತದೆ. ಆದಕ್ಕೆಂದೇ ಮುಂದಿನ ಮಂತ್ರದಲ್ಲಿ ಮುಕ್ತಿಯ ಪ್ರಾರ್ಥನೆ ಹೇಳಿ, ಮುಕ್ತಿ ಸ್ವರೂಪ–ತದನುಷಂಗವಾಗಿ ಅಂತ ಕಾಲದ ಸಾಧನೆಯನ್ನು ಸೂಚಿಸಿದೆ.

## ೧೭

ಮಂತ್ರ :—ವಾಯುರನಿಲಮಮೃತಂ
ಅಥೇದಂ ಭಸ್ಮಾಂತಂ ಶರೀರಂ ||
ಓಂ ಕ್ರತೋಸ್ಮರ ಕೃತಂಸ್ಮರ
ಕ್ರತೋ ಸ್ಮರ ಕೃತಂ ಸ್ಮರ || ೧೭ ||

ಪದಪಾಠ :—ವಾಯುಃ, ಅನಿಲಂ, ಅಮೃತಂ, ಅಥ, ಇದಂ, ಭಸ್ಮಾಂತಂ, ಶರೀರಂ | ಓಂ, ಕ್ರತೋ, ಸ್ಮರ, ಕೃತಂ, ಸ್ಮರ, ಕ್ರತೋ, ಸ್ಮರ, ಕೃತಂ, ಸ್ಮರ||

ಅರ್ಥ :—ಈ ಪ್ರಾಣ ಚೈತನ್ಯಮಯ ಅಮೃತ ತತ್ವದಲ್ಲಿ ಲೀನವಾಗಲಿ. ಎಲೈ ದೃಢಸಂಕಲ್ಪಮಯ ಜೀವನೆ, ಆತನ ಕೃತಿಯನ್ನು ತಿಳಿ. ಶರೀರ ಬೂದಿಯಾಗಲಿ. ಈಶ್ವರನ ನಾಮವನ್ನು ಸ್ಮರಿಸುತ್ತಾ ಎಲೈ (ನನ್ನ) ಜೀವವೆ, ತಿಳಿ, (ನಿನ್ನ ಸಂಕಲ್ಪವನ್ನು ತೊರೆದು) ಆತನ ಕೃತಿಯನ್ನು ತಿಳಿ.

### ಟಿಪ್ಪಣಿ

(೧೭.೧) ಇಲ್ಲಿ ವಾಯು ಪ್ರತೀಕದಲ್ಲಿ ಈಶ್ವರನ ಧ್ಯಾನ ಮಾಡಬೇಕಾಗಿದೆ. ಯಾವ ಅಂತರ್ಯಾಮಿ ವಾಯುವಿನ ಚಾಲಕನೋ, ಆತನೇ ನನ್ನ ಪ್ರಾಣದ ಚಾಲಕ. ಅದರ ಹೆಸರೇ 'ಸತ್ಯ'. ವಾಯು, ಪ್ರಾಣಗಳನ್ನು ಬಂಗಾರದ ತೆರೆಯೆಂದು ತಿಳಿಯಬೇಕು.

(೧೭.೨) "ವಾಯುಃ (ಕರ್ತೃಪದ) ಅನಿಲಮ್ (ಕರ್ಮಪದ) ಪ್ರತಿಪದ್ಯತಾಮ್ (ಅಧ್ಯಾಹೃತವಾದ ಕ್ರಿಯಾಪದ). ಇದರ ಒಂದರ್ಥ— "ವಾಯು ಎಂದರೆ ಶರೀರಗತ ವಾಯು ಅರ್ಥಾತ್ ಪ್ರಾಣದಲ್ಲಿ, ನಿರಂತರ ಚಲನ ಮಾಡುತ್ತಿರುವ ಅನಿಲದಲ್ಲಿ, ಎಂದರೆ ಬ್ರಹ್ಮಾಂಡಗತ ವಾಯುವಿನಲ್ಲಿ ಬೆರೆತುಹೋಗಲಿ." ಈ ಅರ್ಥ ಈ ವಾಕ್ಯಕ್ಕೆ ಉಪಲಕ್ಷಣಾತ್ಮಕ. ಅದರ ವ್ಯಾಪಕಾರ್ಥ—ಶರೀರದಲ್ಲಿ ಯಾವಯಾವ ತತ್ತ್ವಗಳಿವೆಯೋ, ಅವೆಲ್ಲಾ ಅವುಗಳ ಮೂಲ ದೇವತೆಗಳಲ್ಲಿ ಲೀನಹೊಂದಲಿ ಎಂದಾಗುತ್ತದೆ.

(೧೭.೩) 'ವಾಯುರನಿಲಮ್' ಇದರ ಎರಡನೆಯ ಅರ್ಥ–ಚೈತನ್ಯಮಯ ಪರಮಾತ್ಮತತ್ವದಲ್ಲಿ ಜೀವ ಕಲೆತುಹೋಗಲಿ. 'ವಾಯುಃ' ಎಂದರೆ 'ಜೀವ' ಎಂಬರ್ಥವನ್ನು 'ವಾತಿ ಗಚ್ಛತಿ ಇತಿ ವಾಯುಃ'

ಎಂಬ ವ್ಯುತ್ಪತ್ತಿ ಸೂಚಿಸುತ್ತದೆ. ಜೀವ ಉಪಾಧಿಯುಕ್ತವಾಗಿ, ದೇಹದಿಂದ ದೇಹಾಂತರಕ್ಕೆ, ವಾಸನಾನುರೂಪವಾಗಿ ತೆರಳುತ್ತಿರುತ್ತದೆ. ಅದು ಹಾಗೆ ಹೋಗದಿರಲಿ, ನಿರುಪಾಧಿಕವಾಗಿರಲಿ ಎಂಬುದೇ ಇಲ್ಲಿ ಇದರಿಂದ ಅಭಿಪ್ರೇತ.

(೧೭೫) 'ಅನಿಲ' ಶಬ್ದ 'ಅನ್' ಎಂದರೆ 'ಚಲನಮಾಡುವುದು' ಎಂಬ ಧಾತುವಿನಿಂದಾಗಿದೆ. ಎಲ್ಲಾ ಕ್ರಿಯೆಗಳಲ್ಲೂ ಯಾವುದಾದರೊಂದು ವಿಧವಾದ ಚಲನವಿದ್ದೇ ಇರುತ್ತದೆ. ಆದುದರಿಂದ ಇದನ್ನು ಧಾತುಗಳೆಲ್ಲಕ್ಕೂ ಧಾತುವೆನ್ನಬೇಕು. ಸಂಸ್ಕೃತದಲ್ಲಿ 'ಗಮನ, ಅಶನ' ಮುಂತಾದ ಕ್ರಿಯಾವಾಚಕ ನಾಮಪದಗಳನ್ನು ನಿಷ್ಪತ್ತಿಮಾಡುವಾಗ ಸೇರಿಸುವ 'ಅನ' ಪ್ರತ್ಯಯವೂ 'ಅನ್' ಧಾತುವಿನ ರೂಪವೆಂದೇ ನಾನು ತಿಳಿಯುತ್ತೇನೆ. ಈ ರೀತಿಯಾದ ಮೂಲಭೂತ, ವ್ಯಾಪಕ ಧಾತುವಿನಿಂದ 'ಅನಿಲ' ಶಬ್ದ ಆಗಿದೆ. ಅದಲ್ಲದೆ 'ಅನ್' ಧಾತುವಿನ ವಿಶೇಷಾರ್ಥ 'ಶ್ವಾಸನಾದಿ ವಾಯುಕ್ರಿಯೆ' ಎಂದಾಗುತ್ತದೆ. ಆ ಅರ್ಥ 'ಪ್ರಾಣ, ಅಪಾನ' ಮುಂತಾದ ಶಬ್ದಗಳಲ್ಲಿ ಕಾಣಬರುತ್ತದೆ. ಅದರಿಂದ 'ಅನಿಲ' ಎಂದರೆ ವಾಯು ಎಂಬ ವಿಶೇಷಾರ್ಥ ನಿಷ್ಪನ್ನವಾಗಿದೆ. ಈ ಮಂತ್ರದಲ್ಲಿ ಈ ಎರಡರ್ಥಗಳೂ ಅಭಿಪ್ರೇತ ನೀವೇ ಮೇಲೆ ಕಂಡಿದೀರಿ.

(೧೭೬) 'ಅಮೃತಂ' ಈ ಶಬ್ದ ಹಿಂದೆ ೧೧, ೧೪ನೇ ಮಂತ್ರದ ಮಧ್ಯೆ ಬಂದಿದೆ. ಅಲ್ಲಿ ಅದು ಮೋಕ್ಷ-ವಾಚಕ, ಇಲ್ಲಿ ಈಶ್ವರನನ್ನು ನಿರ್ದೇಶಿಸಲು ಯೋಜಿಸಲ್ಪಟ್ಟಿದೆ. ಎರಡೂ ಸೇರಿ ಅರ್ಥ ಒಂದೇ, ಮರಣರಾಹಿತ್ಯವೇ ಚೈತನ್ಯದ ಲಕ್ಷಣ. ಸರ್ವವೂ ಮೃತವಾಗಿ ಯಾವುದು ಉಳಿಯುತ್ತದೆಯೋ, ಅದೇ ಚೈತನ್ಯ. ಬೃಹದಾರಣ್ಯಕ (೧-೩-೨೮) ದಲ್ಲಿನ 'ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂ ಗಮಯ' ಈ ಮೂರು ಸುಪ್ರಸಿದ್ಧ ಮಂತ್ರಗಳು 'ಅಭ್ಯಾರೋಹಾರ್ಥ' ವಾಗಿ ಎಂದರೆ ಸಾಧಕನ ಉನ್ನತಿಗಾಗಿ ಜಪ್ಯವೆಂದು ಹೇಳಿದೆ. ಈಶಾವಾಸ್ಯದ ೧೫, ೧೬, ೧೭ನೇ ಮಂತ್ರಗಳಲ್ಲಿ ಅವು ಮೂರೂ ಯಥಾಕ್ರಮ ಸೂಚಿತವಾಗಿವೆ.

(೧೭೭) ‘ಭಸ್ಮಾಂತಂ ಶರೀರಂ (ಭೂಯಾತ್)’– ಇದು ದಹನ ವಿಧಿಯ ಉಲ್ಲೇಖ. ದಹನಾಭಿಲಾಷೆ ವೈದಿಕಧರ್ಮದ ಒಂದು ವೈಶಿಷ್ಟ್ಯ. ದೇಹದ ಸ್ಮರಣೆ ಯಾವುದಾದರೂ ರೀತಿಯಲ್ಲಿ ಉಳಿಯಬೇಕೆಂದು ಸರ್ವರೂ ಯಥಾಶಕ್ತಿ ಪ್ರಯತ್ನಮಾಡುತ್ತಲೇ ಇರುತ್ತಾರೆ. ಅದಕ್ಕೆ ಪ್ರತಿಯಾಗಿ, ಸಾಧ್ಯವಾದರೆ ಆ ಸ್ಮರಣ ನಿಃಶೇಷವಾಗಿ ಇಲ್ಲದಂತಾಗಬೇಕೆಂಬುದೇ ವೈದಿಕ ಸಾಧಕರ ಪವಿತ್ರ ಅಪೇಕ್ಷೆ.*

(೧೭೮) ‘ಅಥೇದಂ ಭಸ್ಮಾಂತಂ ಶರೀರಂ’–ಇಲ್ಲಿ ಅಥ ಶಬ್ದದಲ್ಲಿ ಸ್ವಾರಸ್ಯ ತುಂಬಿದೆ. ಅಥ ಎಂದರೆ ‘ಅನಂತರ’. ಮೊದಲು ಪರಮಾತ್ಮನಲ್ಲಿ ಜೀವ ಸೇರಿಹೋಗಲಿ ಆಮೇಲೆ ದೇಹ ಬೂದಿಯಾಗಲಿ. ಜೀವಭಾವವೇ ಶಾಶ್ವತವಾಗುಳಿದು, ಸುಮ್ಮನೆ ದಹನ ವಿಧಿಯ ನಾಟಕ ಮಾತ್ರ ಮಾಡಿ ಗಳಿಸುವುದಾದರೂ ಏನು? ಜೀವತ್ವ ನಾಶವಾಗಲಿ. ಆದರ ಸ್ಮಾರಕವಾದ ದೇಹವೂ ನಾಶವಾಗಲಿ. ಮೊದಲು ವಿಜಯ, ಅನಂತರ ವಿಜಯೋತ್ಸವ. ಮಾನವ ದೇಹ ಮೋಕ್ಷಾರ್ಥವಾದ್ದು. ತನ್ನ ಉದ್ದೇಶವನ್ನು ಸಾಧಿಸಿದ ಮೇಲೆಯೆ ಅದು ದಹನಕ್ಕೆ ಅಧಿಕಾರಿ ಆಗುತ್ತದೆ.

(೧೭೯) ಶರೀರ ಶಬ್ದವನ್ನು ಶೃ ಎಂದರೆ ‘ಒಡೆಯುವುದು’, ಶ್ರಿ ಎಂದರೆ ಆಶ್ರಯಿಸುವುದು–ಈ ಎರಡು ಧಾತುಗಳಿಂದಲೂ ನಿಷ್ಪತ್ತಿಮಾಡಲಾಗುತ್ತದೆ. ಶರೀರ ಶೀರ್ಣವಾಗುವಂಥದು, ಒಡೆಯುವಂಥದು. ಇದನ್ನು ಗಮನದಲ್ಲಿಟ್ಟು ಅದರ ಬಗ್ಗೆ ಹೆಚ್ಚು ಆಸಕ್ತಿಗೊಳ್ಳಬಾರದು. ಅಂತೆಯೇ ಅದು ಸಾಧನೆಗಳ ಆಶ್ರಯಸ್ಥಾನವೆಂಬುದನ್ನು ತಿಳಿದು ಅದನ್ನು ಉಪೇಕ್ಷಿಸದೆ ಅದಕ್ಕೆ ಯಥಾಪ್ರಾಪ್ತ ಭೋಗವನ್ನು ಕೊಡಬೇಕು. ಹೀಗೆ ಎರಡು ಅರ್ಥಗಳನ್ನು ‘ಶರೀರ’ ಶಬ್ದ ಕೊಡುತ್ತದೆ. ಸ್ವಲ್ಪದರಲ್ಲಿ ಹೇಳುವದಾದರೆ– “ತೇನ ತ್ಯಕ್ತೇನ ಭುಂಜೀಥಾಃ”

(೧೮೦) ‘ಓಮ್’. ಈಶ್ವರನ ಹೆಸರು. ಮೂರೂ ವೇದವನ್ನು ಕುದಿಸಿದರೆ ಅದರಿಂದ ಈ ಸಾರ ಹೊರಟಿತು ಎಂದು ಇದರ ವರ್ಣನೆ

---

* ‘ಮಾಝೇನಾಮರೂಪ ಲೋಪೋ। ಅಸತೇಪಣ ಹಾರಪೋ॥’
—ಜ್ಞಾನದೇವ.
“ನನ್ನ ನಾಮ-ರೂಪ ಲುಪ್ತವಾಗಲಿ; ಅಸತ್ಯತೆ ಸಡಿಲವಾಗಲಿ”.

ಉಪನಿಷತ್ತಿನಲ್ಲಿದೆ. (ಛಾಂದೋಗ್ಯ ೨-೨೩-೩). ಅನೇಕ ಉಪನಿಷತ್ತುಗಳಲ್ಲಿ ಇದರ ಅನೇಕ ಪ್ರಕಾರವಾದ ವರ್ಣನೆಯಿದೆ. ಸಣ್ಣದಾದ ಮಾಂಡೂಕ್ಯವಂತೂ ಓಂಕಾರದ ವ್ಯಾಖ್ಯೆಗೆಂದೇ ಹೊರಟಿದೆ. ಯೋಗಸೂತ್ರಗಳಲ್ಲಿ ಜಪಕ್ಕಾಗಿ ಓಂಕಾರವೇ ಸೂಚಿತವಾಗಿದೆ. ಇದರ ಅರಿವಿನಿಂದ ಮಾತ್ರ ಸರ್ವ ವೇದಾಭ್ಯಾಸವೂ ಸಾರ್ಥಕ, ಇಲ್ಲದಿದ್ದರೆ ಇಲ್ಲ ಎಂದು ವೇದಗಳು ಸ್ವತಃ ಹೇಳುತ್ತವೆ.

'ಋಚೋ ಅಕ್ಷರೇ ಪರಮೇ ವ್ಯೋಮನ್
ಯಸ್ ತನ್ನವೇದ ಕಿಮೃಚಾ ಕರಿಷ್ಯತಿ ||' ಋಗ್ವೇದ.

(೧೮೧) ಹತ್ತನೆಯ ಮಂತ್ರದ 'ತತ್', ಹದಿನೈದನೆಯದರ 'ಸತ್ಯ', ಪ್ರಸ್ತುತ ಮಂತ್ರದ 'ಓಂ'—ಈ ಮೂರೂ ಈಶ್ವರನ ಹೆಸರುಗಳು. ಇವು ಈಶ್ವರ ಸ್ವರೂಪದ ಮೂರು ಮುಖಗಳನ್ನು ತೋರಿಸುವಂಥವು. 'ಓಂ'—ಶುಭಾಶುಭಗಳನ್ನೆಲ್ಲಾ ಉದರದಲ್ಲಿ ಜೀರ್ಣಮಾಡುವಂಥದು. 'ತತ್'—ಶುಭಾಶುಭಗಳೆರಡರಿಂದಲೂ ದೂರವಾದುದು; 'ಸತ್ಯ' ಅಥವಾ 'ಸತ್'—ಕೇವಲ ಶುಭ. ಇವು ಮೂರನ್ನೂ ಒಂದುಗೂಡಿಸಿ ಗೀತೆ 'ಓಂ ತತ್ ಸತ್' ಎಂಬ ಬ್ರಹ್ಮನಿರ್ದೇಶವನ್ನು ಯೋಚಿಸಿದೆ. (ಅದರ ವಿವರಣೆಗಾಗಿ ಸ್ಥಿತಪ್ರಜ್ಞದರ್ಶನದ ವ್ಯಾಖ್ಯೆ ೧೭ನ್ನು ನೋಡಿ.)

(೧೮೨) ಜೀವನಿಂದ ಜನ್ಮ ಜನ್ಮಾಂತರಗಳಲ್ಲಿ ಅನೇಕ ಶುಭಾಶುಭ ಸಂಕಲ್ಪಗಳು ಮಾಡಲ್ಪಟ್ಟಿವೆ. ಅವೆಲ್ಲವೂ ಮರೆತುಹೋಗಲೆಂದು ಈ ಅಂತಿಮ ಪ್ರಾರ್ಥನೆ ಆದುದರಿಂದ ಶುಭಗಳನ್ನು ಹೊಟ್ಟೆಯಲ್ಲಡಗಿಸುವ ಶಕ್ತಿಯುಳ್ಳ ಓಂಕಾರದ ಸ್ಮರಣೆ ಇಲ್ಲಿ ಯಥಾಯೋಗ್ಯವಾಗಿ ಮಾಡಲ್ಪಟ್ಟಿದೆ.

(೧೮೩) ಜೀವನನ್ನು ಇಲ್ಲಿ 'ಕ್ರತು' ಎಂದರೆ 'ಸಂಕಲ್ಪ' ಶಬ್ದದಿಂದ ಕರೆದಿದೆ. ಜೀವ—ಸ್ವರೂಪದ ಈ ವರ್ಣನೆ ಸಮರ್ಪಕ, ಒಪ್ಪುವಂಥದು. ಸಂಕಲ್ಪ ಎಂದರೆ ಜೀವ, ನಿಸ್ಸಂಕಲ್ಪನೇ ಶಿವ, ಸಂಕಲ್ಪರಹಿತ ಭಾವವೇ ಸಾಧನೆ.

(೧೮೪) 'ಕ್ರತು' ಶಬ್ದ ವೇದದಲ್ಲಿ ಬಹಳ ಸಲ ಬರುತ್ತದೆ. ಅದರ ಅರ್ಥ ಸಾಮಾನ್ಯತಃ ಸಂಕಲ್ಪವೆಂದಿರುತ್ತದೆ. ಆದರೆ ಸಂಕಲ್ಪ, ಕ್ರತುಗಳಲ್ಲಿ ಸೂಕ್ಷ್ಮಭೇದವಿದೆ. ಕ್ರತು ಶಬ್ದ 'ಕೃ' ಧಾತುವಿನಿಂದ; ಅಂತೇ

ಅದು ಕರ್ಮಪ್ರೇರಕ ಸಂಕಲ್ಪ. 'ಯಥಾ ಕ್ರತುರ್ಭವತಿ, ತಥಾ ಕರ್ಮ ಕುರುತೇ' (ಬೃಹ. ೪-೪-೫) ಈ ವಾಕ್ಯದಲ್ಲಿ ಕ್ರತು, ಕರ್ಮ ಈ ಶಬ್ದಗಳ ಸಂಬಂಧವನ್ನು ಜೋಡಿಸಿ ತಿಳಿಸಿದೆ. ಸಣ್ಣ ಪುಟ್ಟ ಸಂಕಲ್ಪ ಬರುತ್ತವೆ. ಆದರೆ ಯಾವ ಸಂಕಲ್ಪವನ್ನು ಅನುಸರಿಸಿ ಮನುಷ್ಯ ಕರ್ಮ ಮಾಡುತಾನೋ, ಅದೇ ಕ್ರತುವಾಗುತ್ತದೆ. ಐತರೇಯ ಉಪನಿಷತ್ತಿನಲ್ಲಿ ಪ್ರಜ್ಞೆಯ ವಿಶ್ಲೇಷಣವನ್ನು ಅನೇಕ ವೃತ್ತಿಗಳ ರೂಪದಲ್ಲಿ ನಿರ್ದೇಶಿಸಿದೆ. ಅಲ್ಲಿ ಕ್ರತು ಸಂಕಲ್ಪದಿಂದ ಭಿನ್ನವಾಗಿ ನಿರ್ದಿಷ್ಟವಾಗಿರುವುದು ಸಿಗುತ್ತದೆ. ಅಲ್ಲಿ ಈ ಸೂಕ್ಷ್ಮಭೇದ ಅಭಿಪ್ರೇತವಾಗಿದೆ. (ಐತರೇಯ ೩-೫-೨). ಲೌಕಿಕ ಭಾಷೆಯಲ್ಲಿ 'ಕ್ರತು' ಎಂದರೆ ದೃಢಸಂಕಲ್ಪ ಅಥವಾ ಕೃತಸಂಕಲ್ಪ.

(೧೮೫) 'ಓಂ ಕ್ರತೋ ಸ್ಮರ, ಕೃತಂ ಸ್ಮರ'—"ಎಲೈ ಸಂಕಲ್ಪ ರೂಪಿ ಜೀವನೆ, ನಿನ್ನ ಕೃತಿಗಳನ್ನು ಅರಿ". ಹೀಗೆ ಇದರರ್ಥ ಮಾಡಲಾಗುತ್ತದೆ. ನಾನೂ ಹಾಗೆಯೇ ಮಾಡಿದೇನೆ. ಆದರೆ ಅದು ಪ್ರಕರಣಕ್ಕೆ ಹೊಂದಿಲ್ಲ. ಇಲ್ಲಿಯಾದರೋ ಜೀವ-ದಶೆಯ ಲೋಪವೇ ಬಯಸಲ್ಪಟ್ಟಿದೆ. ಆದಕ್ಕೆಂದು ಈಶ್ವರನ ಚಾರಿತ್ರ್ಯ ಸ್ಮರಣೆಯೇ ಆಗಬೇಕು. ಈಶ್ವರನ ಮಂಗಲ ಚಾರಿತ್ರ್ಯವನ್ನು ಹಿಂದಿನ ಮಂತ್ರದಲ್ಲಿ ವಿವರಿಸಿಯೆ ಇದೆ.

(೧೮೬) "ಕೃತಂ ಸ್ಮರ". ಇಲ್ಲಿ 'ಕೃತಂ' ಶಬ್ದದಿಂದ ನಾಮ, ರೂಪ, ಗುಣ, ಕರ್ಮ, ಎಲ್ಲವೂ ಲಕ್ಷ್ಯವಾದುವು. ಈಶ್ವರನ ಕೃತಿ, ಆತನ ಮಹದುಪಕಾರ ಸ್ಮರಿಸಬೇಕಾದುದು. ಆತನ ನಾಮ, ಆತನ ರೂಪ, ಆತನ ಗುಣ ಹಾಡತಕ್ಕದುದು. ತನ್ನ ಸಂಕಲ್ಪವನ್ನು ಆತನದರಲ್ಲಿ ವಿಲೀನಮಾಡಿ, ದೇಹ-ಭಾವವನ್ನು ಮರೆಯಬೇಕು. ಇದಕ್ಕಿಂತಲೂ ಕಲ್ಯಾಣಕಾರಕವಾದುದು ಮನುಷ್ಯನಿಗೆ ಏನಿದೆ?

(೧೮೭) ಇದರಲ್ಲಿನ ವಿಚಾರಕ್ಕೆ ಸಮಾನಾರ್ಥಕ ಶ್ಲೋಕ—

"ಓಂ ಇತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಂ ॥

—ಗೀತಾ ೮-೧೩.

(೧೮೮) ಇಲ್ಲಿನ ನಾಲ್ಕನೆಯ ಚರಣದ ಬದಲು 'ಕ್ಲಿಬೇಸ್ಮರ ಕೃತಂ ಸ್ಮರ" ಎಂಬ ಪಾಠ ಭೇದವೂ ಒಂದಿದೆ. ಅದರ ಅರ್ಥ—'ಸಂಕಲ್ಪ

ವನ್ನು ಮರೆಯಲಿಕ್ಕೆ ಈಶ್ವರನ ಕೃತಿಗಳನ್ನು ಸ್ಮರಿಸು" ಎಂದರೆ ಇದರಲ್ಲಿ ಈಶ್ವರ ಸ್ಮರಣೆಯ ಕಾರಣವನ್ನು ಸ್ಪಷ್ಟಗೊಳಿಸಿದೆ. 'ಕ್ಲಿಬ್' ಈ ಕೃದಂತನಾಮ 'ಕ್ಲಿಪ್' ಎಂದರೆ ಕತ್ತರಿಸು ಎಂಬರ್ಥದ ಪ್ರಾಚೀನ ಧಾತುವಿನಿಂದಾಗಿದೆ. ಈ ಧಾತು ಆಂಗ್ಲಭಾಷೆಯಲ್ಲಿ ಉಳಿದು ಬಂದಿದೆ. ಉಗುರು, ಕೂದಲು ಕತ್ತರಿಸುವ ಸಂದರ್ಭದಲ್ಲಿ ಅದನ್ನು ಆಂಗ್ಲಭಾಷೆಯಲ್ಲಿ ಬಳಸುತ್ತಾರೆ. ಮುಂದಿನ ಸಂಸ್ಕೃತದಲ್ಲಿ 'ಕ್ಲಪ್' ಎಂಬ ಧಾತುವಿನ ರೂಪ ಬರುತ್ತಿರುತ್ತದೆ. ಮನುಸ್ಮೃತಿಯ ವಚನದಲ್ಲಿ 'ಕ್ಲಪ್ತ ಕೇಶ–ನಖ–ಶ್ಮಶ್ರುಃ' ಎಂದು ಕತ್ತರಿಸು ಎಂಬರ್ಥದಲ್ಲಿ ಉಪಲಬ್ಧವಾಗುತ್ತದೆ. 'ಕ್ಲಿಬೇಸ್ಮರ' ಇತ್ಯಾದಿ ಪಾಠಭೇದದಿಂದ 'ಕೃತಂ ಸ್ಮರ' ಎಂಬುದರರ್ಥ ಈಶ್ವರನ ಕೃತಿಯನ್ನು ನೆನೆಯಬೇಕೇ ಹೊರತು ಜೀವನ ಕೃತಿಯಲ್ಲ ಎಂದು ಹೆಚ್ಚು ಸ್ಪಷ್ಟಪಡಿಸುತ್ತದೆ.

(೧೮೯) 'ಕ್ರತೋಸ್ಮರ ಕೃತಂಸ್ಮರ' ಈ ಚರಣದ ದ್ವಿರುಕ್ತಿ ಈಶ್ವರನ ಸ್ಮರಣೆ ಅಂತ್ಯಕಾಲದಲ್ಲಿ ಆಗತ್ಯವೆಂದು ತಿಳಿಸಲು ಇದೆ. (೨೧೩ ಟಿ. ನೋಡಿ) ಅಂತ್ಯಕಾಲದ ಸಾಧನೆಯಲ್ಲಿ ಈಶ್ವರ ಸ್ಮರಣೆಯ ಉಪಾಂಗವೆಂದು ಪ್ರಾಣನಿರೋಧದ ಬಾಹ್ಯ ಸಾಧನೆಯನ್ನು ಯೋಗಶಾಸ್ತ್ರ ತಿಳಿಸುತ್ತದೆ. ಗೀತೆಯಲ್ಲೂ ಸಂಕ್ಷಿಪ್ತವಾಗಿ ಅದು ಎಂಟನೆಯ ಅಧ್ಯಾಯದಲ್ಲಿ ಬಂದಿದೆ. 'ವಾಯುರನಿಲಮಮೃತಂ'—ಈ ವಾಕ್ಯ ಅದನ್ನೂ ಸೂಚಿಸುತ್ತದೆಂದು ಎಣಿಸಲಾದೀತು. ಇದು ಆ ವಾಕ್ಯದ ಮೂರನೆಯ ಅರ್ಥ. ಉಳಿದ ಅರ್ಥಗಳು ೧೭೩, ೧೭೪ ಟಿಪ್ಪಣಿಗಳಲ್ಲಿ ಬಂದಿರುತ್ತದೆ.

(೧೯೦) ಮೋಕ್ಷದ ಸ್ವರೂಪವನ್ನು ಈ ಮಂತ್ರದಲ್ಲಿ ಪರಿಪೂರ್ಣವಾಗಿ ಸಿದ್ಧಾಂತಿಸಿದೆ. (೧) ದೇಹ ಬೂದಿಯಾಗಬೇಕು. (೨) ಪ್ರಾಣ ಮುಂತಾದ ಸೂಕ್ಷ್ಮ ತತ್ವಗಳು ಆಯಾ ದೇವತೆಗಳಲ್ಲಿ ಲೀನವಾಗಬೇಕು. (೩) ಈಶ್ವರ ಚಿಂತನೆಯಿಂದ ಸಂಕಲ್ಪ ಛಿನ್ನವಾಗಬೇಕು. (೪) ಜೀವ ಪರಮಾತ್ಮನಲ್ಲಿ ಸೇರಬೇಕು.

(೧೯೧) ಈ ಮಂತ್ರದಲ್ಲಿ ತೋರಿಸಿರುವ ಮೋಕ್ಷದ ಸ್ವರೂಪ ಮುಂಡಕೋಪನಿಷತ್ತಿನ ಮಂತ್ರದಲ್ಲಿ ವಿವರಿಸಲ್ಪಟ್ಟಿದೆ:

" ಗತಾಃ ಕಲಾಃ ಪಂಚದಶಪ್ರತಿಷ್ಠಾಃ
ದೇವಾಶ್ಚ ಸರ್ವೇ ಪ್ರತಿದೇವತಾಸು ।
ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ
ಪರೇವ್ಯಯೇ ಸರ್ವ ಏಕೀಭವಂತಿ ॥ ಮುಂಡಕ ೩-೨-೭.

(೧೯೩) ಅಂತಕಾಲದಲ್ಲಿ ಈಶ್ವರ ಸ್ಮರಣೆ ಘಟಿಸಲೆಂದು ಸಯುಕ್ತಿಕ ವಾಗಿ ಬಯಸುವುದೇ ಆದಲ್ಲಿ, ಸಂಪೂರ್ಣ ಜೀವಿತ ತದ್ಭಾವ-ಭಾವಿತ ವಾಗಬೇಕು. ಇಡೀ ಆಯುಷ್ಯದಲ್ಲಿ ಪವಿತ್ರ ನಿರ್ಮಲ ಜೀವನ ಜರುಗಿಸುವ ಪ್ರಯತ್ನಮಾಡಬೇಕು. ಅದಕ್ಕಾಗಿಯೇ ಮುಂದಿನ ಮಂತ್ರದ ಪ್ರಾರ್ಥನೆ.

೧೮

ಮಂತ್ರ :—ಅಗ್ನೇನಯ ಸುಪಥಾರಾಯೇ ಅಸ್ಮಾನ್
ವಿಶ್ವಾನಿ ದೇವ ವಯುನಾನಿ ವಿದ್ವಾನ್ ॥
ಯುಯೋಧ್ಯ್ಯಸ್ಮಜ್ಜುಹುರಾಣಮೇನೋ
ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ ॥ ೧೮ ॥

ಪದಪಾಠ :—ಅಗ್ನೇ, ನಯ, ಸುಪಥಾ, ರಾಯೇ, ಅಸ್ಮಾನ್, ವಿಶ್ವಾನಿ, ದೇವ, ವಯುನಾನಿ, ವಿದ್ವಾನ್ । ಯುಯೋಧಿ, ಅಸ್ಮತ್, ಜುಹುರಾಣಮ್, ಏನಃ, ಭೂಯಿಷ್ಠಾಂ, ತೇ ನಮ ಉಕ್ತಿಂ, ವಿಧೇಮ ॥

ಅರ್ಥ :—ಹೇ ಮಾರ್ಗದರ್ಶಕ ದೇದೀಪ್ಯಮಾನ ಪ್ರಭೋ, ವಿಶ್ವ ದಲ್ಲಿ ಅಡಗಿರುವ ಸಕಲ ತತ್ವಗಳೂ ನಿನಗೆ ತಿಳಿದಿವೆ. ನಮ್ಮನ್ನು ಸರಳ ಮಾರ್ಗದಲ್ಲಿ ಆ ಪರಮ ಆನಂದದ ಕಡೆಗೆ ಒಯ್ಯಿ. ವಕ್ರಗತಿಯ ಪಾಪ ವನ್ನು ನಮ್ಮಿಂದ ಹೊರದೂಡು. ನಿನಗೆ ನಾವು ಪುನಃ ಪುನಃ ನಮ್ರ ವಾಣಿಯಿಂದ ಬಿನ್ನವಿಸುತ್ತೇವೆ.

## ಟಿಪ್ಪಣಿ

(೧೯೪) ಇಲ್ಲಿ ಅಗ್ನಿಪ್ರತೀಕದಲ್ಲಿ ಈಶ್ವರನ ಧ್ಯಾನ ಮಾಡಬೇಕು. ಯಾವ ಅಂತರ್ಯಾಮಿ ಅಗ್ನಿಯ ಉದ್ದೀಪಕನೋ, ನನ್ನ ಶರೀರದ ಉದ್ದೀಪಕನೂ ಆತನೇ. ಆತನ ಹೆಸರು 'ಸತ್ಯ'. ಅಗ್ನಿ, ಶರೀರ ಚಿನ್ನದ ತೆರೆಯೆಂದು ತಿಳಿಯತಕ್ಕದ್ದು.

(೧೯ಳ) ಆಯುಷ್ಯದಲ್ಲಿನ ಎಲ್ಲಾ ಗಹನ ಕಾರ್ಯಗಳನ್ನೂ ಅಗ್ನಿ ಸಾಕ್ಷಿಯಾಗಿ ಮಾಡುವುದು ವೈದಿಕದ ರೀತಿ. ಅದಕ್ಕನುಸಾರವಾಗಿ ಈ ಮಂತ್ರದಲ್ಲಿ ಅಗ್ನಿಸಾನ್ನಿಧ್ಯದಲ್ಲಿ ಚಾರಿತ್ರ್ಯ-ಪ್ರಾರ್ಥನೆ ಮಾಡಿದೆ ಇದು ಅಗ್ನಿ ಸಾಕ್ಷಿತವಾದ ಚಾರಿತ್ರ್ಯ-ಪ್ರತಿಜ್ಞೆ.

(೧೯ಱ) ಅಗ್ನಿ ಶಬ್ದದ ನಿರುಕ್ತಿಯನ್ನು ಯಾಸ್ಕನು ಅನೇಕ ಬಗೆಯಾಗಿ ಹೇಳಿದಾನೆ. ಅವುಗಳಲ್ಲಿ "ಅಗ್ನಿ: ಅಗ್ರಣೀ" ಈ ನಿರುಕ್ತಿ ಇಲ್ಲಿ ಹೊಂದುತ್ತದೆ. ಏಕೆಂದರೆ ಇಲ್ಲಿ ಅಗ್ನಿಯಿಂದ ಮಾರ್ಗಪ್ರದರ್ಶನವನ್ನು ಬಯಸಿದೆ. ವ್ಯುತ್ಪತ್ತಿ ಶಾಸ್ತ್ರ ರೀತ್ಯಾ 'ಅಂಜ್' ಎಂದರೆ ವ್ಯಕ್ತವಾಗುವುದು, ಪ್ರಕಾಶಿಸುವುದು. ಈ ಧಾತುವಿನಿಂದ ಅಗ್ನಿ ಶಬ್ದ ಆಗಿದೆ. ಅದು ಬೇರೆ ಬೇರೆ ಅಪಭ್ರಂಶರೂಪಗಳಲ್ಲಿ ಅನೇಕ ಭಾಷೆಗಳಲ್ಲಿದೆ ಯಾವುದು ಪ್ರಕಟಹೊಂದಿದೆಯೊ ಅದೆಲ್ಲವೂ ಅಗ್ನಿಯ ರೂಪವೆಂದೇ ತಿಳಿಯತಕ್ಕದ್ದು ಇದಲ್ಲದೆ, ಅಗ್ನಿ ತನ್ನ ಪ್ರಕಾಶಕತೆಯಿಂದ ಜ್ಞಾನ ಸ್ವರೂಪಿಯೆಂದೂ ಕಲ್ಪಿಸಲ್ಪಟ್ಟಿದೆ. ಆದಕ್ಕಾಗಿಯೆ ವೇದದಲ್ಲಿ ಅದನ್ನು 'ಜಾತವೇದಸ್' ಎಂತಲೂ ಪ್ರಸ್ತುತ ಮಂತ್ರದಲ್ಲಿ 'ವಿದ್ವಾನ್' ಎಂತಲೂ ಕರೆದಿದೆ. ಒಟ್ಟುಗೂಡಿಸಿ, ಅಗ್ನಿಯೆಂದರೆ ವಿಶ್ವ-ರೂಪದಿಂದ ವ್ಯಕ್ತವಾದ, ವಿಶ್ವದ ತತ್ವಗಳನ್ನು ತಿಳಿದಿರುವ, ವಿಶ್ವಕ್ಕೆ ಮಾರ್ಗದರ್ಶಕನಾದ, ಸಗುಣ ಸಾಕಾರ ಪರಮೇಶ್ವರ.

(೧೯೬) 'ಅಗ್ನೇನಯ ಸುಪಥಾ' ಸುಪಂಥವೆಂದರೆ ಸರಳಮಾರ್ಗ:- ೧೫ನೆ ಮಂತ್ರದ 'ಸತ್ಯಧರ್ಮ', ವೇದಪ್ರತಿಪಾದಿತ 'ಋಜುನೀತಿ', ಯೋಗಶಾಸ್ತ್ರದ 'ಯಮ-ನಿಯಮ', ಮನುವಿನ ಸಾರ್ವವರ್ಣಿಕ 'ಮಾನವಧರ್ಮ, ಜೈನ ಬೌದ್ಧರ 'ಚಾರಿತ್ರ್ಯ', ಕುರಾಣದ 'ಸಿರಾತ್ ವಲ್ ಮುಸ್ತಕೀಮ್', ಸಂತರು ಆಕ್ರಮಿಸಿದ ಸುಲಭ 'ಸಿದ್ಧಪಂಥ.'

(೧೯೭) 'ರಾಯೇ' ಎಂದರೆ 'ರೈ' ಕಡೆಗೆ; 'ರೈ' ಮತ್ತು 'ರಯಿ' ಎಂಬ ಎರಡು ಶಬ್ದ ವೇದದಲ್ಲಿ ಬಾರಿಬಾರಿಗೆ ಬರುತ್ತವೆ. ಮೂಲದಲ್ಲಿ ಈ ಎರಡು ಶಬ್ದಗಳೂ ಒಂದೇ ಶಬ್ದದ ಎರಡು ರೂಪ. ಆದರೂ ಅವುಗಳ ಅರ್ಥದಲ್ಲಿ ಬೇರೆ ಬೇರೆ ಶಕ್ತಿಯಿದೆ. 'ರಯಿ' ಶಬ್ದದ ಅರ್ಥ 'ಸಮೃದ್ಧಿ'. ನಮ್ಮ 'ಕುಣಬಾಊ' ಮರಾಠಿಯ-'ಲಈ' (ಎಂದರೆ ಹೆಚ್ಚು, ಹೇರಳ)

ಶಬ್ದಕ್ಕೆ ವೈದಿಕ ' ರಯಿ ' ಆಧಾರ. ' ರಯಿ ' ಶಬ್ದವನ್ನು ಉಪನಿಷತ್ತು ಗಳು ಹೀಗೆ ವರ್ಣಿಸಿವೆ—

" ರಯಿರ್ವಾ ಏತತ್ ಸರ್ವಂ ಯನ್ಮೂರ್ತಂಚಾಮೂರ್ತಂ ಚ "
—ಪ್ರಶ್ನೋಪನಿಷತ್ ೧-೫.

ಮೂರ್ತ, ಅಮೂರ್ತ ಎಲ್ಲವೂ ' ರಯಿ '.

' ರೈ ' ಶಬ್ದ ಮುಖ್ಯವಾಗಿ ಆನಂದವನ್ನು ಸೂಚಿಸುತ್ತದೆ. ಅದರದೇ ಮತ್ತೊಂದು ರೂಪ ' ರೇ '. ಅದು ' ರೇವಾ ' ಎಂಬ ಶಬ್ದದಲ್ಲಿ ಉಪ ಲಬ್ಧವಾಗುತ್ತದೆ. ' ರೇ-ವಾ ' ಎಂದರೆ ' ನರ್ಮ-ದಾ ' ಆನಂದ ಕೊಡುವವಳು, ಆನಂದಮಯಿ. ರೈ, ರಯಿ ಎರಡೂ ಮೂಲತಃ ಒಂದೇ ಆಗಿದ್ದುದರಿಂದ ಎರಡೂ ಅರ್ಥಛಾಯೆಯನ್ನೂ ಒಂದುಗೂಡಿಸಿ ಈ ಮಂತ್ರದಲ್ಲಿ ' ರೈ ' ಎಂಬುದರ ಅರ್ಥವನ್ನು ಪರಮ ಆನಂದವೆಂದು ನಿಷ್ಪತ್ತಿ ಮಾಡಿದೆ.

(೧೯೮) ಈಶ್ವರ ದರ್ಶನ (೧೬ನೇ ಮಂತ್ರ), ಈಶ್ವರ-ಪ್ರವೇಶ (೧೭ನೇ ಮಂತ್ರ)–ಇದೇ ಪರಮಾನಂದ. ಇದೇ ' ರಯಿ ', ಇದೇ ' ಲಕ್ಷ್ಮೀ '.

" ಏಷಾಸ್ಯ ಪರಮಾ ಗತಿಃ । ಏಷಾಸ್ಯ ಪರಮಾ ಸಂಪತ್ ।
ಏಷೋಽಸ್ಯ ಪರಮ ಆನಂದಃ । ಏತ-ಸ್ಯೈವ ಆನಂದಸ್ಯ
ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ । " ಬೃಹ. ೪-೩-೩೨.

' ಯೋ ರಾಯೇಽವನಿರ್ ಮಹಾನ್ '—ಯಾರು ಪರಮಾನಂದ ಧಾಮನೋ (ಋಗ್ವೇದ—೧-೪-೧೦)

(೧೯೯) ' ರೈ ' ಶಬ್ದ ಧನ-ವಿರೋಧಿ ಎಂದು ಮಂಡಿಸಲ್ಪಟ್ಟಿದೆ. ಜೀವನದ ಗುರಿ ಧನವಲ್ಲ, ' ರೈ ' ಎಂದು ಸೂಚಿಸಬೇಕಾಗಿದೆ. ಯೋಗ್ಯ ಮಾರ್ಗದಿಂದ ಗಳಿಸಿದ ಹಣವೇ ಆನಂದಕ್ಕೆ ಸಾಧನವಾದೀತು. ಕರ್ಮ ಮಾಡದೆಯೆ ದರೋಡೆಯಿಂದ ಹಣ ಗಳಿಸುವುದು ಸಾಮಾಜಿಕ ಆಧ್ಯಾತ್ಮಿಕ ಆನಂದವನ್ನು ನಿರ್ಮೂಲ ಮಾಡಿದಂತೆಯೆ. ಇಂಥ ಧನ ಧನವಲ್ಲ, ನಿಧನ.

(೨೦೦) ಆಧ್ಯಾತ್ಮಿಕ ಭಾಷೆಯಲ್ಲಿ ಉಪನಿಷತ್ತುಗಳು ಯಾವುದನ್ನು 'ವಿತ್ತೈಷಣೆ' ಎಂದಿವೆಯೋ, ಸಾಮಾಜಿಕ ಭಾಷೆಯಲ್ಲಿ 'ಮನು' ಯಾವುದನ್ನು

'ಅರ್ಥಶುಚಿತ್ವ' ಎಂದಿದಾನೆಯೊ ಅದರ ಪ್ರತ್ಯಕ್ಷ ಬೋಧೆಯನ್ನು ಮಂತ್ರ ೧, ೨ರಲ್ಲಿ ಕೊಟ್ಟಿತ್ತು. ಅದನ್ನೇ ಮುಂದೆ ೮, ೧೫ನೆ ಮಂತ್ರಗಳಲ್ಲಿ, ಕೊನೆಯಲ್ಲಿಯೂ ಸೂಚಿಸಿ ದೃಢಗೊಳಿಸಿದೆ.

(೨೦೧) 'ಅಗ್ನೇನಯ ಸುಪಥಾ ರಾಯೇ' ಸಾಧ್ಯ ಪವಿತ್ರವಿದ್ದರೆ ಸಾಧನೆ ಹೇಗಿದ್ದರೂ ಸರಿ ಎಂಬ ಭ್ರಮೆ, ಆದಿಕಾಲದಿಂದ ಹಿಡಿದು ಇಂದಿನವರೆಗೂ ರೂಢಿಯಲ್ಲಿದೆ. 'ಸುಪಥಾ' ಶಬ್ದ ಅದರ ನಿವಾರಣೆ ಮಾಡುತ್ತದೆ. ಸಾಧನದ ಅಪವಿತ್ರತೆ ಸಾಧ್ಯವನ್ನೂ ದುಷ್ಟಗೊಳಿಸದೆ ಬಿಡದೆಂದು ಶಾಸ್ತ್ರವಿದೆ.

(೨೦೨) 'ಅಸ್ಮಾನ್'. ಇದು ಸಾಮೂಹಿಕ ಪ್ರಾರ್ಥನೆ. ಹಿಂದಿನ ಎರಡು ಮಂತ್ರಗಳ ಏಕವಚನಪ್ರಯೋಗ ಇಲ್ಲಿ ತಟ್ಟನೆ ಬಹುವಚನಕ್ಕೆ ತಿರುಗಿ ಗಮನ ಸೆಳೆಯುತ್ತದೆ. ಈಶ್ವರ-ದರ್ಶನ, ಈಶ್ವರ-ಪ್ರವೇಶಗಳು ವ್ಯಕ್ತಿತ್ವ ಲೋಪಮಾಡುತ್ತವೆ. ಇದು ಆಯಾ ವ್ಯಕ್ತಿಯ ಮಟ್ಟಿಗೇ ಆದುದ ರಿಂದ ಕೇವಲ ವ್ಯಕ್ತಿಗತವೇ ಆಗುತ್ತದೆ. 'ಮನುಷ್ಯಾಣಾಂ ಸಹಸ್ರೇಷು' ಸಾವಿರಕ್ಕೆ ಒಬ್ಬನಿಗೆ ದೊರೆಯುವಂಥದು ಅದು. ಹಾಗೆ ಲಭಿಸಿದವನಿಗೆ ಸಂಸಾರ ಮುಗಿದರೂ, ಉಳಿದವರಿಗೆ ಬಾಕಿಯಾಗಿ ಇದ್ದೇ ಇರುತ್ತದೆ. ಚಾರಿತ್ರ್ಯಸಾಧನೆ ಹೀಗಲ್ಲ. ಆ ಸಾಧನೆ ಸಾಮೂಹಿಕವಾಗಬಲ್ಲದು; ಆಗುವಂತೆ ಮಾಡಲೂ ಬೇಕು ಸಾಮೂಹಿಕವಾದರೆಯೆ ಅದು ಪೂರ್ಣವಾ ಗುತ್ತದೆ, ಅದನ್ನು ಒರೆಗಲ್ಲಿಗೆ ಹಾಕಿದಂತಾಗುತ್ತದೆ. ಅದರಿಂದಲೇ ಒಂದು ರೀತಿ ಅದು ಸುಲಭವಾಗುತ್ತದೆ. 'ಏಕಮೇಕಾಂ ಕರೂ ಸಾಹ್ಯ | ಅವಘೇ ಧರೂಂ ಸುಪಂಥ್ |' ಒಬ್ಬರಿಗೊಬ್ಬರು ಸಹಾಯಗೈಯುವಾ, ಕಡೆಯಲ್ಲಿ ಸುಪಂಥ ಹಿಡಿಯುವಾ. ಹೀಗೆ ಈ ಸಾಮುದಾಯಿಕ ಸಾಧನೆಯ ಸುಪಂಥ.

(೨೦೩) ಹಿಂದೆ ೧೫ನೆ ಮಂತ್ರದಲ್ಲಿ 'ಸತ್ಯಧರ್ಮ'ದ ದರ್ಶನದ ಬಗ್ಗೆ ಪ್ರಾರ್ಥನೆಯಿತ್ತು. ಇಲ್ಲಿನ ಪ್ರಾರ್ಥನೆ ಸತ್ಯಧರ್ಮದ ಆಚಾರದ ಬಗ್ಗೆ.

(೨೦೪) 'ವಯುನಾನಿ' 'ವೇ' ಎಂದರೆ ನೇಯುವುದು, ಗ್ರಥನ ಮಾಡು, ಪೋಣಿಸು. ಅದಕ್ಕೆ 'ಅನ್' ಮತ್ತು 'ಉನ್' ಪ್ರತ್ಯಯ ಸೇರಿ 'ವಯನ', 'ವಯುನ' ಎಂದು ಎರಡು ಶಬ್ದಗಳಾಗುತ್ತವೆ. 'ವಯನ' ಎಂದರೆ ನೇಯ್ಗೆಯ ಕೆಲಸ, 'ವಯುನ' ಎಂದರೆ ನೇದುದು. ಗ್ರಥನ

ಅನುಸ್ಯೂತಿ, ಜೀವನದಲ್ಲಿ ಜೋಡಿಸಲ್ಪಟ್ಟ ಅಥವಾ ವ್ಯಾಪಿಸಿರುವ ತತ್ತ್ವಗಳು. ಅನುಸ್ಯೂತಿಯು ಅಥವಾ ವಯುನಗಳ ತಿಳಿವು ಹೆಚ್ಚಿದಷ್ಟು ಕರ್ತವ್ಯ ಪಥ ಸ್ಫುಟವಾಗುತ್ತದೆ. (ಕನ್ನಡದ ವಯಿನ, ವೈನ ಎಂದರೆ ಹದನು ಎಂಬುದನ್ನು ನೆನೆಯಬೇಕು.) ಉದಾಹರಣೆಗೆ ಎಲ್ಲಾ ಪ್ರಾಣಿಗಳಿಗೂ ಜೀವಿಸುವ ಇಚ್ಛೆಯಿರುತ್ತದೆ ಎಂಬ ವಯುನ (ಮಂತ್ರ ೨) ತಿಳಿಯಿತೆಂದರೆ ಅಹಿಂಸಾ-ಧರ್ಮ ಹರಿದುಬರುತ್ತದೆ. ನಾನೂ ಇತರ ಭೂತಗಳೂ ಒಬ್ಬರಲ್ಲೊಬ್ಬರು ಸೇರಿದೇವೆಂಬ ವಯುನ (ಮಂತ್ರ ೬) ಗ್ರಹಿಸಿದರೆ ಅನಂತರ ಯಾರಲ್ಲಿಯೂ ಜುಗುಪ್ಸೆ, ತಿರಸ್ಕಾರ ಕೂಡದೆಂಬುದನ್ನು ಹೇಳಬೇಕಾಗುವುದಿಲ್ಲ.

(೨೦೫) 'ಯುಯೋಧಿ'. 'ಯು' ಎಂದರೆ ದೂರಮಾಡುವುದು ಈ ಧಾತುವಿನ ರೂಪವೆಂದು ಗಣಿಸಲ್ಪಟ್ಟಿದೆ. ಆದರೆ 'ಯುಧ್' ಎಂದರೆ 'ಯುದ್ಧ ಮಾಡು' ಎಂಬ ಧಾತುನಿಂದ ಇಂಥ ರೂಪವಾವಾಗಲು ವೈದಿಕ ವ್ಯಾಕರಣದ ಅಡಚಣೆಯೇನೂ ಇಲ್ಲ. ಎಂದರೆ ಎರಡೂ ಅರ್ಥಗಳನ್ನು ಒಟ್ಟುಗೂಡಿಸಿ 'ನಿರ್ಮೂಲ ಮಾಡು' ಎಂದರ್ಥ ಮಾಡುವುದು ಯುಕ್ತ. ಸಾಧಕ ಈಶ್ವರಸ್ಮರಣಪೂರ್ವಕ ನಿರಂತರವೂ ಪಾಪದೊಡನೆ ಕಾದಬೇಕೆಂದು ಈ ಪ್ರಾರ್ಥನೆಯ ತಾತ್ಪರ್ಯ.

**'ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ' ಗೀತಾ. ೮-೭**
**'ರಾತ್ರೀ-ದಿವಸ್ ಆಮ್ಹಾ ಯುದ್ಧಾಚ ಪ್ರಸಂಗ್ ।**
**ಅಂತರ್ಬಾಹ್ಯ ಜಗ ಆಣಿ ಮನ'॥ —ತುಕಾರಾಮ.**

"ರಾತ್ರಿ ಹಗಲು ನಮಗೆ ಯುದ್ಧದ ಪ್ರಸಂಗ. ಒಳಗೆ, ಹೊರಗೆ, ಜಗದಲ್ಲೂ ಮನದಲ್ಲೂ."

(೨೦೬) "ಜುಹುರಾಣಮೇನಃ" ಎಂದರೆ ವಕ್ರಗತಿಯ ಪಾಪ. ವಕ್ರವೃತ್ತಿಯೆ ಪಾಪ. ಋಜುವೃತ್ತಿ ಪುಣ್ಯ, ವಕ್ರತೆಯೆ ಪಾಪ. ಪಾಪ ಪುಣ್ಯಗಳ ವ್ಯಾಖ್ಯೆ ಇದಕ್ಕಿಂತ ಸಮರ್ಪಕವಾಗಿ ಯಾರು ತಾನೆ ಮಾಡಲಾದೀತು? ವೇದದಲ್ಲಿ ಪಾಪವನ್ನು 'ದುರಿತ', ಪುಣ್ಯವನ್ನು 'ಸುವಿತ' ಎಂದಿದಾರೆ. ಅವುಗಳ ಅಕ್ಷರಶಃ ಅರ್ಥ—ವಕ್ರಗತಿ, ಸರಳಗತಿ.

(೨೦೭) "ಜುಹುರಾಣಂ", 'ಹ್ವೃ ಕುಟಿಲಗತೌ' ಎಂಬ ಧಾತುವಿ

ನಿಂದ 'ವಕ್ರವಾಗಿ ಹೋಗುವುದು ಎಂದು ಹೇಳಿದೆ. ನೇಯುವಾಗ ಮಗ್ಗದ ಲಾಳಿಯನ್ನು ಸರಳವಾಗಿ, ನೆಟ್ಟಗೆ ಎಸೆಯಬೇಕು. ಕೈಗೆ ಸೊಟ್ಟಗೆ ಲಾಳಿಯೆಸೆವ ಅಭ್ಯಾಸವಿತ್ತೆಂದರೆ ಎಳೆ ಸೊಟ್ಟಗೆ ಆಗುತ್ತದೆ. ಹೊಸದಾಗಿ ಕಲಿಯುವವರು ಮಧ್ಯೆ ದಾರ ತುಂಬಿಬಿಡುತ್ತಾರೆ. ಇದೆಲ್ಲಾ ಪಾಪದ ಪ್ರಕ್ರಿಯೆ. 'ವಯುನ', 'ಜುಹುರಾಣ' ಇವು ನೇಯ್ಗೆಯ ಪರಿಭಾಷೆಯನ್ನು ಸೂಚಿಸುತ್ತವೆ.

(೨೦೮) 'ಭೂಯಿಷ್ಠಾಂತೇ ನಮ-ಉಕ್ತಿಂ ವಿಧೇಮ'. ವ್ರತ ಪ್ರತಿಜ್ಞೆಗೆ ನಮ್ರತೆಯ ಬೆಂಬಲ ಆವಶ್ಯಕ. ಪ್ರತಿಜ್ಞೆ ನಮ್ರತೆ ಎರಡೂ ಸೇರಿದರೆ ವ್ರತ-ರಕ್ಷೆಯಾಗುತ್ತದೆ. ಇದೇ 'ರಾಮ-ರಕ್ಷೆ'. ಇದೇ 'ಅಗ್ನಿ-ಸಾಕ್ಷಿ'.

(೨೦೯) ಸ್ವಲ್ಪ ಪಾಠಾಂತರ ಬಿಟ್ಟರೆ ಈ ಉಪನಿಷತ್ತು ಯಜು ರ್ವೇದದ ಕಡೆಯ ಅಧ್ಯಾಯ ಎಂದಮೇಲೆ ಈ ಮಂತ್ರವೂ ಯಜುರ್ವೇದ ಗತವಾಗಿದೆ. ಆದರೆ ಅದು ಮೂಲ ಯಜುರ್ವೇದದಲ್ಲಿ ಋಗ್ವೇದದಿಂದ ಬಂದಿದೆ. (ಋಗ್ವೇದ ೧-೧೮೯-೧). ಗರ್ಹಿತ ಅಥವಾ ನಿಂದ್ಯ ಕೆಲಸ ಕೈಯಿಂದ ನಡೆದಾಗ, ಅಥವಾ ಮಾರ್ಗಭ್ರಂಶದ ಪ್ರಸಂಗದಲ್ಲಿ, ಅದನ್ನು ಜಪಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿದೆ. ಇದು ನೈಮಿತ್ತಿಕ ವಿನಿಯೋಗ ವಾಯಿತು. ವಸ್ತುತಃ ಈ ಮಂತ್ರ ಜೀವನದಲ್ಲಿ ನಿತ್ಯದ ಮಾರ್ಗದರ್ಶಕ ಸಂಗಾತಿ.

(೨೧೦) ಮಾಧ್ಯಂದಿನ ಪಾಠದಲ್ಲಿ ಸಮಾಪ್ತಿಗೆ 'ಓಂ ಖಂ ಬ್ರಹ್ಮ' ಎಂಬ ನಿರ್ದೇಶ ಜೋಡಿಸಿದೆ. ಅದರಲ್ಲಿನ 'ಓಂ' ಶಬ್ದ ೧೭ನೆ ಮಂತ್ರ ದಲ್ಲಿ ಸಂಗೃಹೀತವಾಗಿದೆ. ಬ್ರಹ್ಮಪದ ಸ್ವಶಬ್ದದಿಂದ ಉಲ್ಲೇಖಿಸಲ್ಪ ಟ್ಟಿಲ್ಲವಾದರೂ, ೪-೫ ಮಂತ್ರಗಳ ನಡುವಿನ ನಪುಂಸಕಲಿಂಗ ಪ್ರಯೋಗ ಅದನ್ನುದ್ದೇಶಿಸಿಯೇ ಇದೆ. (ಟಿ. ೫೪) 'ಖಂ' ಎಂದರೆ ಆಕಾಶದಂತೆ ವ್ಯಾಪಕವಾದುದು. ಇದನ್ನು ಉಪಾಸನೆಗಾಗಿ ಹೇಳಿದುದು. ಬ್ರಹ್ಮನ ವ್ಯಾಪ್ತಿಯಲ್ಲಿ ಇದರ ಲೆಕ್ಕ ಏನು ಬಂತು?

(೨೧೧) ಮಂತ್ರ ೧೬ ರಿಂದ ೧೮—ಈ ಧ್ಯಾನತ್ರಯಿ ಒಂದು ಸಂಪೂರ್ಣ ಚಿಂತನೆ. 'ಭೂಃ ಭುವಃ ಸ್ವಃ' ಇದು ಓಂಕಾರದ ಮೂರು

ಮಾತ್ರೆ. ಪೃಥ್ವೀ, ಅಂತರಿಕ್ಷ, ಸ್ವರ್ಗ. ಇದು ಅದರ ಆದಿಭೌತಿಕ ಅರ್ಥ. ಅಗ್ನಿ, ವಾಯು, ಸೂರ್ಯ ಇವು ಅಧಿದೈವತೆಗಳು. ಶರೀರ, ಪ್ರಾಣ, ಬುದ್ಧಿ, ಅದರಲ್ಲಿ ಅಧ್ಯಾತ್ಮ.

(೨೧೨) ಮಂತ್ರ ೧೬ ರಿಂದ ೧೮ ರಲ್ಲಿನ ಸೂರ್ಯ, ಅನಿಲ, ಅಗ್ನಿ ಈ ಶಬ್ದಗಳ ಅರ್ಥವನ್ನು ಹೇಗೆ ಮಾಡಬೇಕು? ವೇದಚಿಂತನೆಯಲ್ಲಿ ಈ ಪ್ರಶ್ನೆ ದಿನವೂ ಬರುತ್ತದೆ. ವೇದದಲ್ಲಿ ಈ ದೇವತೆಗಳ, ಇತರ ಅನೇಕ ದೇವತೆಗಳ ಸೂಕ್ತಗಳು ತುಂಬಿವೆ. ಇದನ್ನು ಯಥಾಶ್ರುತವಾಗಿ ಬೇರೆ ಬೇರೆ ದೇವತೆಗಳೆಂದು ತಿಳಿಯಬೇಕೆ? ಇದರ ಉತ್ತರವನ್ನು ವೇದಗಳೇ ಸ್ವತಃ ಹೀಗೆ ಕೊಟ್ಟಿವೆ—"ಏಕಂ ಸತ್ ವಿಪ್ರಾ ಬಹುಧಾ ವದಂತಿ." ಪರಮೇಶ್ವರನೊಬ್ಬನೇ ಇದ್ದರೂ ಉಪಾಸಕರು ಬಹುವಿಧ ಹೆಸರುಗಳನ್ನು ಕೊಟ್ಟಿದಾರೆ. ಹಾಗಿದ್ದರೆ ಉಪಾಸಕರು ತಮಗೆ ರುಚಿಸುವ ಒಂದೇ ಹೆಸರಿಗೆ ಅಂಟಿರಬೇಕು ಆದರೆ ವೇದದಲ್ಲಿ ಒಬ್ಬನೇ ಉಪಾಸಕ ಅನೇಕ ಹೆಸರುಗಳನ್ನು ಸ್ವೀಕರಿಸುವಂತೆ ಕಾಣುತ್ತದೆಯಲ್ಲ? ಈಶಾವಾಸ್ಯದಲ್ಲೂ ಅದೇ ರೀತಿ. ಇದೇನು ಗೊಂದಲ? ಇದು ಗೊಂದಲವಲ್ಲ, ಮರೆ-ತೆರೆ. ಸಂಪೂರ್ಣ ಪರಮೇಶ್ವರ ಒಂದೇ ಅಭಿವ್ಯಕ್ತಿಯಲ್ಲಿ ತುಂಬಲಾರ. ಮೊದಲು ಆತನ ಭಿನ್ನಭಿನ್ನ ವ್ಯಕ್ತಿಯ ವಿಶ್ಲೇಷಣ ಮಾಡಬೇಕು. ಅನಂತರ ಅವುಗಳೆಲ್ಲದರ ಸಂಶ್ಲೇಷಣ. ಅಂತ್ಯದಲ್ಲಿ ಅದರ ಆಚೆಯೂ ಹೋಗಿ 'ಸೋऽಹಮಸ್ಮಿ' ಅನುಭವದಲ್ಲಿ ಕರಗಿಹೋಗಬೇಕು. ಹೀಗೆ ಇದು ಒಂದು ಪರಿಪೂರ್ಣ ಉಪಾಸನೆಯ ಪ್ರಕ್ರಿಯೆ. ೧೬ ನೆ ಮಂತ್ರದಲ್ಲಿ ಇದು ವಿವರಿಸಲ್ಪಟ್ಟಿದೆ. ವೇದಾರ್ಥ-ಮೀಮಾಂಸಾ ಶಾಸ್ತ್ರದ ಆಚಾರ್ಯ ಜೈಮಿನಿ ಅಗ್ನಿವಾಚಕ ವೈಶ್ವಾನರ ಶಬ್ದದ ಚರ್ಚೆಮಾಡುತ್ತಾ "ವೈಶ್ವಾನರ ಶಬ್ದವನ್ನು ಅಕ್ಷರಾರ್ಥದಲ್ಲೂ ಸಾಕ್ಷಾತ್ ಈಶ್ವರ ವಾಚಕ ವೆಂದು ತಿಳಿಯಲು ಏನೂ ಅಡ್ಡಿಯಿಲ್ಲ—" ಎಂದಿದಾನೆ. (ಬ್ರಹ್ಮಸೂತ್ರ ೧-೨-೨೮). ಇದೇ ನ್ಯಾಯವನ್ನು ವ್ಯಾಪಕವಾಗಿ ಮಾಡಿ, 'ಸೂರ್ಯ' ಎಂದರೆ ವಾಚ್ಯಾರ್ಥದಿಂದ 'ಪ್ರೇರಕ' ಪರಮೇಶ್ವರ, 'ಅಗ್ನಿ' ಎಂದರೆ ವಾಚ್ಯಾರ್ಥದಿಂದ 'ದೇದೀಪ್ಯಮಾನ, ಮಾರ್ಗದರ್ಶಕ' ಪರಮೇಶ್ವರ; ಹೀಗೆ ಅರ್ಥವನ್ನು ಗಮನದಲ್ಲಿಟ್ಟರೆ ಎಲ್ಲವೂ ವಿಶದವಾಗುತ್ತದೆ. ಹೀಗಿ

ದ್ದರೂ ಸೂರ್ಯಾದಿ ವಿಶಿಷ್ಟ ಅಭಿವ್ಯಕ್ತಿಗಳನ್ನು ಮರೆಯಬೇಕಾದುದಿಲ್ಲ. ಹೀಗೆ ಈ ವ್ಯಾಪಕ ಸಮನ್ವಯ ದರ್ಶನ.

(೨೧೩) ಉಪನಿಷದಾದಿಗಳ ಸಮಾಪ್ತಿಯಲ್ಲಿ ಕಡೆಯ ಒಂದೆರಡು ಪದಗಳನ್ನು ದ್ವಿರುಕ್ತಿ ಮಾಡುವ ರೀತಿಯಿದೆ ಅದನ್ನು ಶಾಸ್ತ್ರೀಯ ಭಾಷೆಯಲ್ಲಿ 'ಪದಾಭ್ಯಾಸ' ವೆನ್ನುತ್ತಾರೆ ಅದು ಸಮಾಪ್ತಿ ಸೂಚಕ ವೆಂದೂ ಪರಿಗಣಿಸಲ್ಪಡುತ್ತದೆ ಇಂಥ ಪದಾಭ್ಯಾಸ ಈಶಾವಾಸ್ಯದ ಕಡೆಯಲ್ಲಿ ಇಲ್ಲ. ಆದರೆ ೧೭ನೆಯ ಮಂತ್ರದ ಕಡೆಯಲ್ಲಿದೆ ಒಂದು ರೀತಿಯಲ್ಲಿ ಈಶಾವಾಸ್ಯ ಅಲ್ಲಿಗೆ ಮುಗಿದಂತೆಯೂ ಇದೆ ಏಕೆಂದರೆ, ಈ ೧೮ನೆಯ ಮಂತ್ರವನ್ನು ಈಶಾವಾಸ್ಯ ವಿಷಯ ಪೂರ್ತಿಗೆಂದು ಋಗ್ವೇದದಿಂದ ಎರವು ತೆಗೆದುಕೊಂಡಿದೆ. ಅದನ್ನು ಬಿಟ್ಟರೆ ಈಶಾವಾಸ್ಯದ ವಿವೇಚನೆ ಅಸಂಪೂರ್ಣವಾಗುತ್ತದೆ ಅದು ಈಶಾವಾಸ್ಯದ ಅಂಗಭೂತವೇ ಸರಿ ಅನಂತರ ಜೋಡಿಸಿದುದಲ್ಲ. ಆದರೆ ೧೮ನೆ ಮಂತ್ರದ ಕೊನೆಯಲ್ಲಿ ಪದಾಭ್ಯಾಸವೇಕೆ ಇಲ್ಲ ಎನಿಸುತ್ತದೆ. ರೀತಿಯಂತೆ ಪದಾಭ್ಯಾಸ ಅದರಲ್ಲಿಲ್ಲವಾದರೂ ಅದರ ಬದಲು 'ಭೂಯಿಷ್ಠಾಂ ನಮಉಕ್ತಿ' ಗ್ರಂಥದ ಪರಿಸಮಾಪ್ತಿಯನ್ನು ತೋರಿಸುತ್ತದೆ.

**ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

**ಓಂ ಶಾಂತಿಃ ಓಂ ಶಾಂತಿಃ ಓಂ ಶಾಂತಿಃ**



# ಈಶಾವಾಸ್ಯ ಬೋಧೆ

ಇದೊಂದು ಚಿಕ್ಕ ಉಪನಿಷತ್ತು  ಇಷ್ಟು ಚಿಕ್ಕ ಕೃತಿ, ಇಷ್ಟು ಅರ್ಥಸಮಾವಿಷ್ಟವಾದ ಕೃತಿ ಯಾವುದೂ ಇಲ್ಲ. ನಾವು ದಿನವೂ ಗೀತಾ ಪಾರ ಮಾಡುತ್ತೇವೆ  ಅದೂ ಚಿಕ್ಕದೇ  ಅದರಲ್ಲಿ ಹದಿನೆಂಟು ಅಧ್ಯಾಯ ಇವೆ  ಇದರಲ್ಲಿ ಹದಿನೆಂಟೇ ಶ್ಲೋಕ. ಜಗತ್ತಿನ ಆದಿಗ್ರಂಥ ವೇದ ಎಂದು ಜನರು ತಿಳಿಯುತ್ತಾರೆ. ವೇದದ ರಹಸ್ಯ ಯಾವ ಗ್ರಂಥಗಳಲ್ಲಿ ಬಂದಿದೆಯೋ ಅವನ್ನು ವೇದಾಂತ ಎನ್ನುತ್ತಾರೆ. ಬೇಕಾದಷ್ಟು ವೇದಾಂತ ಗ್ರಂಥ ಇವೆ  ಈಶಾವಾಸ್ಯವೂ ಒಂದು ವೇದಾಂತ ಗ್ರಂಥ. ಸ್ವಲ್ಪದರಲ್ಲಿ ವೇದದ ಸಾರವೆಲ್ಲವೂ ಇದರಲ್ಲಿ ಬಂದಿದೆ. ಅದರ ಸಂಗ್ರಹ ಮೊದಲನೆ ಮಂತ್ರದಲ್ಲಿ ಇದೆ.

ಅದರ ಅರ್ಥ ಹೀಗೆ: ಜಗತ್ತಿನಲ್ಲಿ ಇರುವ ಜೀವನ ಎಲ್ಲವೂ ಈಶ್ವರನಿಂದ ತುಂಬಿದುದು. ಈಶ್ವರನಿಲ್ಲದ ವಸ್ತು ಯಾವುದೂ ಇಲ್ಲ. ಸತ್ತೆಯ ಭಾಷೆಯಲ್ಲಿ ಹೇಳಿದರೆ ಇದೆಲ್ಲವೂ ಈಶ್ವರ-ಸತ್ತೆ  ಅವನೊಬ್ಬನೇ ಒಡೆಯ. ಇದನ್ನರಿತು ನಾವು ಎಲ್ಲವನ್ನೂ ಅವನಿಗೆ ಸಮರ್ಪಿಸಬೇಕು. ಆವನಿಂದ ಲಭಿಸಿದುದನ್ನು ಪ್ರಸಾದ ಎಂದು ತಿಳಿದು ಪಡೆಯಬೇಕು  ಇಲ್ಲಿ ನನ್ನದು ಏನೂ ಇಲ್ಲ, ಎಲ್ಲವೂ ಈಶ್ವರನದು—ಈ ಭಾವನೆ ಬೇಕು  ಯಾರು ಹೀಗೆ ಇರಬಲ್ಲರೋ, ಯಾವುದೂ ನನ್ನದಲ್ಲ ಎಂದು ತಿಳಿಯುವರೋ—ಎಲ್ಲವೂ ಅವರದೇ. ಅವರಿಗೆ ಎಲ್ಲವೂ ಲಭಿಸೀತು. ಅಂಥವನು ಲಭಿಸಿದುದರಲ್ಲಿಯೇ ತುಷ್ಟನಾದಾನು  ಇತರರನ್ನು ಅಸೂಯೆ ಪಡನು  ಯಾರ ಹಣವನ್ನೂ ಬಯಸ  ಈ ಚಿಕ್ಕ ಮಂತ್ರದಲ್ಲಿ ಮಹಾನ್ ಜೀವನವ್ಯಾಪಿಯಾದ ಸಿದ್ಧಾಂತವನ್ನು ಹೇಳಿದಾರೆ. ಅದನ್ನು ಬಾಳಿನಲ್ಲಿ ನಡೆಸುವ ಉಪಾಯವನ್ನೂ ಹೇಳಿದಾರೆ  ಈಶ್ವರ ಸಮರ್ಪಣ, ಪ್ರಸಾದವೆಂದು ಪರಿಗ್ರಹ, ಅಸೂಯೆಪಡದಿರುವುದು, ಹಣ ಬಯಸದಿರುವುದು—ಹೀಗೆ ಈ ಮಂತ್ರದಲ್ಲಿ ಒಂದು ಸಂಪೂರ್ಣ ವಿಚಾರಪ್ರಣಾಳಿ ಇದೆ

ಸಾಧಾರಣವಾಗಿ ಮನುಷ್ಯ ಪರರ ಸೊತ್ತಿಗೆ ಕೈನೀಡುತ್ತಾನೆ  ಏಕೆ? ತಾನು ಸೋಮಾರಿಯಾಗಿ ಬದುಕಬೇಕು  ಆದುದರಿಂದ ಕರ್ಮಮಾಡದೆ

ಬದುಕಲು ಬಯಸುವುದು ಬಾಳಿಗೆ ಮೋಸಮಾಡಿದಂತೆ ಎಂದು ಎರಡನೆಯ ಮಂತ್ರ ಹೇಳುತ್ತದೆ. ನಿರಂತರ ಕರ್ಮಮಾಡುತ್ತಾ ದೇವರು ನಮಗೆ ಕೊಟ್ಟ ಬಾಳನ್ನು ಬಾಳಬೇಕು. ಕರ್ಮವನ್ನು ತಪ್ಪಿಸಿದಾಗ ಬಾಳು ಭಾರವಾಗುತ್ತದೆ, ಶಾಪಗ್ರಸ್ತವಾಗುತ್ತದೆ. ತಿಳಿದೋ ತಿಳಿಯದೆಯೋ ನಾವೆಲ್ಲರೂ ಹೀಗೆಯೇ ಮಾಡುತ್ತಿದೇವೆ. ಇದರಿಂದ ನಮಗೆ ದುಃಖ ಆಗುತ್ತಿದೆ. ಲೋಕದಲ್ಲಿರುವ ಪಾಪವೆಲ್ಲವೂ ಹೆಚ್ಚಾಗಿ ಇದರಿಂದಲೇ ಹುಟ್ಟುತ್ತದೆ.

ಮೂರನೆಯ ಮಂತ್ರದಲ್ಲಿ ಇನ್ನೂ ಮುಂಬರಿದು, ದೇವರನ್ನು ಮರೆತರೆ, ಭೋಗಪರಾಧೀನವೃತ್ತಿ ತಳೆದರೆ, ಇದೇ ಬಾಳಿನಲ್ಲೇ ನರಕದಲ್ಲಿ ಬೀಳಬೇಕಾದೀತು ಬದುಕಿನಲ್ಲಿ ಇದ್ದ ಸ್ಥಿತಿಯೇ ಸತ್ತಮೇಲೆ ಎಂದು ತಿಳಿಸಿದೆ.

ನಾಲ್ಕನೆ, ಐದನೆ ಮಂತ್ರಗಳು ಒಂದು ಸ್ವತಂತ್ರ ಪರಿಚ್ಛೇದ. ಈಶ್ವರನ ಶಕ್ತಿ ಅಲೌಕಿಕ, ಅಪಾರ. ಅವನ ಬಗ್ಗೆ ನಾವು ತರ್ಕಿಸ ಲಾರೆವು. ನಮ್ಮ ತರ್ಕದಿಂದ ಅವನು ಪರಿಮಿತನಾದಾನು. ಅವತಾರ ಮಾಡಿದಾಗ ಮಹಾಕರ್ಮ ಮಾಡುವವನಂತೆ ಕಾಣುತ್ತಾನೆ ಈಶ್ವರ. ಆದರೆ ಆ ಕರ್ಮದ ಲೇಪ ಅವನಿಗಿಲ್ಲ. ಆಗಲೂ ಅವನು ಅಕರ್ಮಿ. ಅವತಾರಮಾಡದೆ ಮೂಲರೂಪದಲ್ಲಿದ್ದಾಗ ಅವನು ಏನೂ ಕರ್ಮಮಾಡ ದವನಂತೆ ಕಾಣುತ್ತಾನೆ ಆಗಲೂ ಇಡೀ ಲೋಕವನ್ನು ಅವನು ಶಾಸನ ಮಾಡುತ್ತಾನೆ. ಆ ಅಕರ್ಮಿ ಸರ್ವಕರ್ಮವನ್ನೂ ಮಾಡುತ್ತಾನೆ. ಗೀತೆಯಲ್ಲಿ ಹೀಗೆ ಹೇಳಿದೆ. ಅದನ್ನೇ ಇಲ್ಲಿ ವಿಸ್ತಾರಗೊಳಿಸಿದೆ.

ಮುಂದೆ ಮೂರು ಮಂತ್ರಗಳಲ್ಲಿ ಭಕ್ತನ ವರ್ಣನೆ. ತನ್ನೊಳಗೆ ಎಲ್ಲರನ್ನೂ, ಎಲ್ಲರೊಳಗೆ ತನ್ನನ್ನೂ ಅವನು ಕಾಣುತ್ತಾನೆ. ಇದೇ ಭಕ್ತಿ. ಭಕ್ತಿಯಿಂದ ಸ್ವ-ಪರ ಭೇದ ಅಳಿಯುತ್ತದೆ. ಮನುಷ್ಯ ತನ್ನ ನಡುವೆ ಸಾವಿರಾರು ಗೋಡೆ ಕಟ್ಟಿದಾನೆ. ಇದರಿಂದಲೇ ರಾಷ್ಟ್ರ, ಸಮಾಜ, ಕುಟುಂಬಗಳಲ್ಲಿ ಜಗಳ ಕದನ ಹುಟ್ಟುತ್ತವೆ. ಈ ಸ್ವ-ಪರ ಭೇದವನ್ನು ಅಳಿಸುವುದು ಈಶ್ವರಜ್ಞಾನದ ಫಲ. ಈ ದಾರಿಯಲ್ಲಿ ಭಕ್ತ ಮುಂದಾಳು. ದಿನದಿನವೂ ಅವನ ಆತ್ಮಭಾವನೆ ಬೆಳೆಯುತ್ತದೆ. ನನ್ನ ದೇಹದ

ವಾಸನೆಗಳು ಇದ್ದಂತೆಯೇ ಇತರರದೂ ಎಂದು ಅವನು ತಿಳಿಯುತ್ತಾನೆ. ಅಂತೆಯೇ ಅವರಿಗೆ ಅನ್ನವಿಟ್ಟು ನೀರು ಕೊಟ್ಟು, ನಾನು ತಿನ್ನೋಣ ಕುಡಿಯೋಣ ಎನ್ನುತ್ತಾನೆ. ನನಗೂ ನನ್ನ ಕುಟುಂಬಕ್ಕೂ ಭೇದವಿಲ್ಲ. ಹಳ್ಳಿಹಳ್ಳಿಯಲ್ಲಿ, ರಾಷ್ಟ್ರರಾಷ್ಟ್ರದಲ್ಲಿ ಏನೂ ಭೇದವಿಲ್ಲ. ಇಷ್ಟೇ ಅಲ್ಲ, ಮನುಷ್ಯ-ಮೃಗದಲ್ಲಿಯೂ ಭೇದ ಮಾಡಲಾರ. ಹೀಗೆ ತನ್ನದು ಪರರದು ಎಂಬ ಭೇದವನ್ನು ಅಳಿಸುತ್ತಾ ಹೋಗುತ್ತಾನೆ ಹೀಗಿರುವವನ ಬಾಳು ಆನಂದಮಯವಾಗುತ್ತದೆ. ಹೀಗೆ ಈಶ್ವರನಿಷ್ಠ ಪುರುಷನ ಅಥವಾ ಆತ್ಮ ಜ್ಞಾನಿಯ ವರ್ಣನೆಮಾಡಿ ಎಂಟನೆಯ ಮಂತ್ರದಲ್ಲಿ ಪೂರ್ವಾರ್ಧವನ್ನು ಮುಗಿಸಲಾಗಿದೆ.

ಮುಂದಿನ ಮೂರು ಮಂತ್ರಗಳಲ್ಲಿ ಬುದ್ಧಿಯ ಕಾರ್ಯದ ವರ್ಣನೆ. ದೇವರು ನಮಗೆ ಕೊಟ್ಟ ಒಂದು ದೊಡ್ಡ ಆಯುಧ ಬುದ್ಧಿ. ಇದರಿಂದ ನಮ್ಮ ಏಳಿಗೆ ಮಾಡಿಕೊಳ್ಳಬೇಕು. ಜಗತ್ತಿನಲ್ಲಿರುವ ಸಮಸ್ತ ಜ್ಞಾನವೂ ನಮಗೇನು ಅಗತ್ಯವಲ್ಲ. ಕೆಲವು ಭಾಗ ಅವಶ್ಯಕ. ಉಳಿದವು ಅನಾವಶ್ಯಕ. ಇವೆರಡರ ವಿವೇಕವನ್ನು ನಾವು ಅರಿಯಬೇಕು. ಅವಶ್ಯಕವಲ್ಲದ ಜ್ಞಾನ ದಿಂದ ಬಾಳು ಭ್ರಷ್ಟವಾದೀತು, ಬುದ್ಧಿಗೆ ವ್ಯರ್ಥ ಭಾರವಾದೀತು. ಅವಶ್ಯಕವಾದುದನ್ನು ಪಡೆಯದಿದ್ದರೆ ಮನುಷ್ಯನ ಕರ್ತವ್ಯ ಪೂರ್ಣ ವಾಗದು. ಅಂತೆಯೇ ಈ ಮಂತ್ರಗಳಲ್ಲಿ ವಿದ್ಯೆಯೂ ಬೇಕು, ಅವಿದ್ಯೆಯೂ ಬೇಕು ಎಂದು ಹೇಳಿದೆ. ಅವಶ್ಯಕವಲ್ಲದುದರ ಬಗ್ಗೆ ಅಜ್ಞಾನವೇ ಇರಲಿ. ಅಪ್ಪಿತಪ್ಪಿ ಅನವಶ್ಯಕ ಜ್ಞಾನ ಆದರೆ, ಅದನ್ನು ಪ್ರಯತ್ನ ಪೂರ್ವಕವಾಗಿ ಮರೆಯಬೇಕು. ಈ ಜ್ಞಾನ ಅಜ್ಞಾನ ಎರಡೂ ನಾವಲ್ಲ. ನಾವು ಕೇವಲ ಸಾಕ್ಷಿಗಳು ಎಂಬುದನ್ನು ಅರಿಯಬೇಕು. ಇದನ್ನು ಅಭ್ಯಾಸ ಮಾಡಿದರೆ ಬುದ್ಧಿ ಈಶ್ವರಪರಾಯಣವಾಗುತ್ತದೆ. ಇಲ್ಲದಿದ್ದರೆ ಅವನತಿಗೆ ಕಾರಣ ವಾಗುತ್ತದೆ.

ಮುಂದಿನ ಮೂರು ಮಂತ್ರದಲ್ಲಿ ಹೃದಯ ಶೋಧನದ ಮಾತು. ಬುದ್ಧಿಯನ್ನು ಶುದ್ಧಿಗೊಳಿಸುವುದು ಹೇಗೆ ಅಗತ್ಯವೋ ಹಾಗೆಯೇ ಹೃದಯವನ್ನೂ ಶುದ್ಧಿಗೊಳಿಸಬೇಕು. ಹೃದಯದೊಳಗೆ ನೋಡಬೇಕು. ಒಳಗೆ ಗುಣ-ದೋಷ ಎರಡೂ ತುಂಬಿವೆ. ನಾವೇನು ಮಾಡಬೇಕು?

ಗುಣಗಳ "ಸಂಭೂತಿ" ಮಾಡಬೇಕು. ವಿಕಾಸಗೊಳಿಸಬೇಕು. ಅವನ್ನು ಉಜ್ವಲಗೊಳಿಸಬೇಕು. ದೋಷಗಳ "ಅಸಂಭೂತಿ" ಮಾಡಬೇಕು. ಹೊಸ ದೋಷ ಹುಟ್ಟದಂತೆ, ಇದ್ದ ದೋಷ ಅಳಿಯುವಂತೆ ಮಾಡಬೇಕು ನಾವು ಮಾಡುವುದೆಲ್ಲ ಕೇವಲ ಚಿತ್ತ-ಶುದ್ಧಿಗಾಗಿಯೇ ಮಾಡಬೇಕು. ಬಾಹ್ಯದೃಷ್ಟಿಯಿಂದ ನಮ್ಮ ಕರ್ಮ ಸಫಲವಾಗಿ, ಜನರು ಎಷ್ಟೇ ಹೊಗಳಿದರೂ ಆ ಕರ್ಮದಿಂದ ನಮ್ಮ ಗುಣ ವೃದ್ಧಿಯಾಗದಿದ್ದರೆ ಆ ಕರ್ಮ ಕೆಟ್ಟದು. ಅದರಿಂದ ನಮ್ಮ ಅವನತಿಯಾಯಿತು ಲೋಕದ್ದೂ ಆಯಿತು. ಈ ದೋಷ-ಗುಣ ಎರಡೂ ನಾವಲ್ಲ. ನಾವು ಬೇರೆ, ಸಾಕ್ಷೀ ರೂಪರು. ಹೀಗೆ ಅಭ್ಯಾಸ ಮಾಡಿದರೆ ನಿಜವಾದ ಹೃದಯಶುದ್ಧಿ.

ಮುಂದಿನದು ಒಂದು ಮಹಾ ಮಂತ್ರ. ಅದರಲ್ಲಿ ದರ್ಶನದ ಸಾರ ಬಂದಿದೆ. ದರ್ಶನ ಸಾರ ಹೀಗೆ: ಲೋಕದಲ್ಲಿ ಸತ್ಯ ಹುದುಗಿದೆ. ಮೋಹದ ಆವರಣದ ಹೊದಿಕೆ ಅದನ್ನು ಮುಚ್ಚಿದೆ. ಮೋಹದ ಹೊದಿಕೆಯನ್ನು ತೆಗೆದುಹಾಕುವವರೆಗೆ ನಮಗೆ ಸತ್ಯದ ದರ್ಶನವಾಗದು. ಏಕೆಂದರೆ, ಬುದ್ಧಿಶಕ್ತಿ ಸಮರ್ಥವಲ್ಲ. ಬುದ್ಧಿಯ ಮೇಲೆ ಮೋಹದ ಹೊದಿಕೆ ಇರುವುದರಿಂದಲೇ ದರ್ಶನವಾಗದು. ಕಾಂಚನಮೋಹ ಒಂದು. ಹೊರಗೂ ಒಳಗೂ ಈ ಮೋಹದಿಂದ ತೆರೆ ಎದ್ದಿವೆ. ಅದರಿಂದ ಸತ್ಯದ ದರ್ಶನವಿಲ್ಲ. ಇನ್ನೂ ಬಗೆಬಗೆಯ ಮೋಹ ಇವೆ ಅವನ್ನು 'ಹಿರಣ್ಮಯ ಪಾತ್ರ' ಎಂದರೆ ಬಂಗಾರದ ಮುಚ್ಚಳ ಎಂದು ಹೇಳಿದೆ. ಸತ್ಯದ ದರ್ಶನವಾಗಬೇಕಾದರೆ ಈ ಒಂಗಾರದ ಮುಚ್ಚಳವನ್ನು ತೆಗೆಯಬೇಕು.

ಕೊನೆಯ ಮೂರು ಮಂತ್ರದಲ್ಲಿ ನಮ್ಮ ವಿಕಾಸಕ್ರಮವನ್ನು ತೋರಿಸಲಾಗಿದೆ. ಹದಿನಾರರಲ್ಲಿ—ನಾವು ಈಶ್ವರ ಎಂದು ಕರೆವವನು ಈ ಜಗತ್ತಿಗೆ ಪ್ರೇರಕ. ಅದನ್ನು ಪಾಲನೆ ಪೋಷಣೆ ಮಾಡುತ್ತಾನೆ. ನಿಯಮನ ಮಾಡುತ್ತಾನೆ. ಇದನ್ನು ನಿತ್ಯನಿರೀಕ್ಷಣೆ ಮಾಡುತ್ತಾನೆ. ಹೀಗೆ ಅವನ ಶಕ್ತಿಯನ್ನು ವರ್ಣಿಸುತ್ತಾರೆ. ಅವನ ಮುಂದೆ ನಾನೊಂದು ತುಚ್ಛಜೀವ. ಆದರೆ ನಮ್ಮಿಬ್ಬರಲ್ಲಿ ತತ್ತ್ವಭೇದವಿದೆ. ನಾನು ಅವನದೇ ಅಂಶ. ಅವನೇ ನಾನು. ಈ ದೇಹ ನನಗೊಂದು ಹೊದಿಕೆ. ಇದೊಂದು ಬಂಗಾರದ ಮುಚ್ಚಳ. ಇದರ ಒಳಗೆ ನಾನು ಅಡಗಿದೇನೆ. ಈ ದೇಹವನ್ನು

ಸರಿಸಬಲ್ಲೆನಾದರೆ ಒಳಗಿರುವ 'ನಾನು' ಕಂಡೇನು. ಈಶ್ವರ ಹೇಗೆ ಪೂರ್ಣನೋ ಸುಂದರನೋ ನಾನೂ ಹಾಗೇ. ಹಾಗೆ ಆಗಬಲ್ಲೆ. ಸೋಹಂ ಮಂತ್ರ ಈ ಭರವಸೆ ಕೊಡುತ್ತದೆ.

ಇದನ್ನು ನಾವು ಆಮರಣಾಂತ ಸಾಧಿಸಿಬೇಕು. ಇರುವ ಭೇದವೆಲ್ಲ ಹೊರಗಡೆ, ಈ ದೇಹದ ಜೊತೆಗೆ. ನನ್ನಲ್ಲಿ–ಆತ್ಮದಲ್ಲಿ–ಏನೂ ಭೇದವಿಲ್ಲ. ಹೊರಗಿನ ಹೊದಿಕೆಯನ್ನು ಸರಿಸಿ ಅಂತರ್ಯಾಮಿಯ ಬಳಿ ಸಾರಬೇಕು. ಕಪ್ಪು-ಬಿಳುಪು, ತೆಳುವು-ದಪ್ಪ, ದಡ್ಡ-ಜಾಣ, ನೀತಿವಂತ-ಅನೀತಿವಂತ ಎಲ್ಲ ಭೇದವೂ ದೇಹಕ್ಕೆ ಸಂಬಂಧಿಸಿದುದು. ಮೇಲಿನದು. ಇದನ್ನು ನಾವು ಮರೆಯಬೇಕು. ಒಳಗಿನ ವಸ್ತುವನ್ನು ಗಳಿಸಬೇಕು. ಹೀಗೆ ಆಮರಣ ಸಾಧನೆ ಮಾಡಿದರೆ ಅಂಥವನ ಮೈ ಕಳಚಿ ಬಿದ್ದಾಗ ಮಣ್ಣಿಗೆ ಮಣ್ಣು ಕಲೆತು, ಆತ್ಮ ಪರಮಾತ್ಮನಲ್ಲಿ ಬೆರೆಯುತ್ತದೆ ಎಂದು ಋಷಿ ಹೇಳುತ್ತಾರೆ.

ಕಡೆಯ ಮಂತ್ರದಲ್ಲಿ ಭಗವಂತನ ಪ್ರಾರ್ಥನೆ. ಮಾರ್ಗದರ್ಶಕ ಅಗ್ನಿರೂಪಿ ಭಗವಂತ. ನಮ್ಮೊಳಗೆ ಇದ್ದು ನಮ್ಮನ್ನು ಬದುಕಿಸಿಡುವ— ಅದಿಲ್ಲದಿದ್ದರೆ ನಮ್ಮ ಮೈ ತಣ್ಣಗಾಗಿ ಹೋದೀತು—ಆ ಉಷ್ಣವನ್ನು ಉಪಾಸನೆಗೆಂದು ಚೈತನ್ಯದ ಸಂಕೇತವಾಗಿ ಮಾಡಿಕೊಂಡಿದೆ. ಅದರ ಮೂಲಕ ನಮಗೆ ಚೈತನ್ಯದ ಗುರುತಾಗುತ್ತದೆ. ಚೈತನ್ಯದ ವ್ಯಾಖ್ಯೆಯಲ್ಲ ಅದು. ಅಗ್ನಿಸ್ವರೂಪ, ಚೈತನ್ಯದಾಯಕ ಭಗವಂತನನ್ನು—ಪ್ರಭೋ, ನಮ್ಮೊಳಗೆ ಚೇತನ, ಬೆಂಕಿ ಇರುವವರೆಗೆ ನಮ್ಮನ್ನು ನೇರವಾದ ದಾರಿಯಲ್ಲಿ ಕರೆದೊಯ್ಯಿ. ವಕ್ರಮಾರ್ಗ ತುಳಿಸಬೇಡ ಎಂದು ಪ್ರಾರ್ಥಿಸಲಾಗಿದೆ. ತಾವು ನೇಯುತ್ತೀರಿ. ಈ ಮಂತ್ರದ ಋಷಿಯೂ ನೇಯುತ್ತಿದ್ದಿರಬೇಕು. ಲಾಳಿ ಹೊಡೆವಾಗ ಸೊಟ್ಟ ಆದರೆ ಬಟ್ಟೆ ಸೊಟ್ಟ ಆಗುತ್ತದೆ, ಕೆಡುತ್ತದೆ. ಆದುದರಿಂದ ಈ ಕೊನೆಯ ಮಂತ್ರದಲ್ಲಿ ಭಗವಂತನನ್ನು ಹೀಗೆ ಪ್ರಾರ್ಥಿಸಿದಾರೆ. ನಮ್ಮ ಬಾಳಿನಲ್ಲಿ ಯಾವ ಬಗೆಯ ವಕ್ರತೆಯೂ ಬಾರದಿರಲಿ. ನೇರವಾದ ದಾರಿ ನಡೆಯಿಸು. ಗುಣಗಳಲ್ಲಿ ಯಾವುದನ್ನು ದೊರೆಯಾಗಿ ಮಾಡಬೇಕು ಎಂದು ನನ್ನನ್ನು ಕೇಳಿದರೆ ಯಾವುದನ್ನೂ ಸ್ಥಾಯೀ ರಾಜನನ್ನಾಗಿ ಮಾಡದೆ ನಿರ್ವಾಚನ ಪದ್ಧತಿಯಂತೆ ಕೆಲಸ ಮಾಡಲು ಇಷ್ಟಪಟ್ಟೇನು. ಬೇರೆಬೇರೆ ಗುಣಗಳಿಗೆ ಕೆಲಕೆಲವು ಕಾಲ

ದೊರೆತನ ಕೊಟ್ಟೇನು. ಆದರೆ ನಾನು ಆರಿಸುವ ಗುಣಗಳಲ್ಲಿ ಋಜುತನಕ್ಕೆ ಮೊದಲ ಸ್ಥಾನ. ಎಲ್ಲಿ ಋಜುತನ, ಸರಲತೆಯೋ ಅಲ್ಲಿ ಧರ್ಮ, ಅಲ್ಲಿ ಜೀವನ. ಎಲ್ಲಿ ವಕ್ರತೆಯೋ ಅಲ್ಲಿ ಅಧರ್ಮ, ಅಲ್ಲಿ ನಾವು. ಕದಿರು ನೆಟ್ಟಗಿರಬೇಕೆಂಬುದು ನೂಲುವವನಿಗೆ ಗೊತ್ತು. ಅದರಲ್ಲಿ ಎಳ್ಳಷ್ಟು ಸೊಟ್ಟು ಇರಬಾರದು. ಕದಿರಿಗೆ ವಕ್ರತೆ ಅಸಹನೀಯವಿದ್ದಂತೆ ನಮ್ಮ ಬಾಳಿನಲ್ಲಿ ವಕ್ರತೆಯನ್ನು ನಾವು ಸಹಿಸಬಾರದು. ಕಾಯಾ ವಾಚಾ ಮನಸಾ, ಒಳಗೂ ಹೊರಗೂ ನಾವು ಸರಲರಾಗಬೇಕು. ಇಂಥ ಸರಲ ಜೀವನಕ್ಕೆ ನಮಗೆ ಬಲ ನೀಡು ಎಂಬುದೇ ಈ ಮಂತ್ರದ ಪ್ರಾರ್ಥನೆ.

ಉಪನಿಷತ್ತಿನ ಆರಂಭ, ಅಂತಗಳಲ್ಲಿ ಶಾಂತಿಮಂತ್ರ ಹೇಳುತ್ತಾರೆ. ಅದರ ಅರ್ಥ ಎಲ್ಲವೂ ಸಂಪೂರ್ಣ. ಆದುದರಿಂದ ಸರ್ವದಾ ಶಾಂತಿಯಿರಲಿ, ಅಶಾಂತಿಗೆ ಏನೂ ಕಾರಣವಿಲ್ಲ. ಆದರೆ ನಮಗೆ ಕಂಡಲ್ಲಿ ದುಃಖ ಕಾಣುತ್ತದೆ. ಎಲ್ಲವೂ ಅಪೂರ್ಣ. ಅದನ್ನು ನಾವು ಪೂರ್ಣಗೊಳಿಸಬೇಕು ಎನಿಸುತ್ತದೆ. ಹಾಗಲ್ಲ. ಕುಂಬಾರ ಮಣ್ಣಿನಿಂದ ಮಡಕೆ ಮಾಡುತ್ತಾನೆ. ಆದರೆ ತಾನು ಹೊಸದೇನನ್ನೂ ಮಾಡುತ್ತಿಲ್ಲ ಎಂಬುದು ಅವನಿಗೆ ತಿಳಿಯಬೇಕು. ಮಣ್ಣಿನಲ್ಲಿ ಮಡಕೆ ಇದ್ದೇ ಇದೆ. ಅಡಗಿದೆ. ನಾನು ನಡುವೆ ನಿಮಿತ್ತಮಾತ್ರ ಬಂದೆ. ಶಿಕ್ಷಕನು ಹೀಗೆ ಯೋಚಿಸಬೇಕು. ವಿದ್ಯಾರ್ಥಿಗೆ ಅವನು ಜ್ಞಾನ ಕೊಡಲಾರ. ವಿದ್ಯಾರ್ಥಿಯ ಬುದ್ಧಿಯಲ್ಲಿ ಜ್ಞಾನ ತುಂಬಿದೆ ಅದನ್ನು ಪ್ರಕಟಗೊಳಿಸಲು ಶಿಕ್ಷಕ ನೆರವಾಗುತ್ತಾನೆ. ತಂದೆತಾಯಿಯರೂ ಹೀಗೆ ಯೋಚಿಸಬೇಕು. ಲೋಕ ಪೂರ್ಣವಾಗಿಯೇ ಇದೆ. ನಡುವೆ ನಮಗೆ ಆಟವಾಡಲು ಒಂದು ಅವಕಾಶ. ನೀರಿನಲ್ಲೇ ಅಲೆ ಹುಟ್ಟುತ್ತದೆ. ಒಂದು ಹುಟ್ಟಿ ಸಾಯುತ್ತದೆ. ಅದರ ಹಿಂದೆಯೇ ಇನ್ನೊಂದು ಹುಟ್ಟಿ ಅದೂ ಸಾಯುತ್ತದೆ. ಎಲ್ಲವೂ ನೀರೇ. ಮುಗಿದಮೇಲೆ ಬರಿಯ ನೀರು. ನಾವೂ ಅಷ್ಟೇ. ನಾವೂ ಹಾಗೆಯೇ. ನಮ್ಮ ಕೆಲಸ ಮಾಡಿ ನಾವು ಕೆಳಗುರುಳಿದಾಗ ಇನ್ನೊಬ್ಬರು ಎದ್ದು ನಿಲ್ಲುತ್ತಾರೆ. ಹೀಗೆ ನಾವು ಯೋಚಿಸಿದರೆ ಅಶಾಂತಿಗೆ ಕಾರಣವೇ ಇರದು. ಆದುದರಿಂದ ಕಟ್ಟಕಡೆಯಲ್ಲಿ ಹೇಳಿದೆ—

**ಓಂ ಶಾಂತಿಃ ಶಾಂತಿಃ ಶಾಂತಿಃ**

**ವಿನೋಬಾ**